ಶ್ರೀ ಮ.ನಿ.ಜ. ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ ಶತಮಾನೋತ್ಸವ ಸ್ಮರಣೆ

ಗ್ರಂಥ ಪ್ರಕಟಣೆ : ೫೩

# ವಚನಾಂತರಂಗ

ಚೆನ್ನವೀರ ಕಣವಿ
ಧಾರವಾಡ

ಪ್ರಕಾಶಕರು
ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ
ಶ್ರೀ ಮುರುಘಾಮಠ
ಮೃತ್ಯುಂಜಯ ನಗರ, ಧಾರವಾಡ

**ವಚನಾಂತರಂಗ-ಚೆನ್ನವೀರ ಕಣವಿ, ಧಾರವಾಡ**
ಪ್ರಕಾಶಕರು: ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ
ಶ್ರೀ ಮುರುಘಾಮಠ, ಮೃತ್ಯುಂಜಯನಗರ, ಧಾರವಾಡ
***

ಮಾರ್ಗದರ್ಶಕರು :
**ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು, ಶ್ರೀ ಮುರುಘಾಮಠ, ಧಾರವಾಡ**

ಪ್ರಧಾನ ಸಂಪಾದಕರು :
**ಡಾ. ವೀರಣ್ಣ ರಾಜೂರ ಮತ್ತು ಬಸವರಾಜ ಹೂಗಾರ**

ಗ್ರಂಥದಾಸೋಹ
**ಲಿಂ. ಶ್ರೀಮತಿ ಗಂಗವ್ವ ಚೆನ್ನಪ್ಪ ಬಾಳಗಿ**
ಇವರ ಸ್ಮರಣಾರ್ಥ
**ಶ್ರೀ ಮಲ್ಲಿಕಾರ್ಜುನ ಚೆನ್ನಪ್ಪ ಬಾಳಗಿ**
ಹಿರೇಮಠ ಓಣಿ, ಕಮಲಾಪುರ, ಧಾರವಾಡ


ಪ್ರಥಮ ಮುದ್ರಣ : ೨೦೧೭
ಪುಟಗಳು : xiii +೧೪೪ = ೧೫೭
ಬೆಲೆ : ೧೦೦/-
ಬಳಸಿದ ಕಾಗದ : ៦೦ ಜಿಎಸ್ಎಂ ಬುಕ್‌ಪ್ರಿಂಟ್
***

ಮುಖಪುಟ ವಿನ್ಯಾಸ : ಬಿ. ಮಾರುತಿ, ಚಿತ್ತಾರ ಕಲಾ ಬಳಗ, ಧಾರವಾಡ
ಅಕ್ಷರ ಸಂಯೋಜನೆ : ಡಾ. ಹನುಮಂತ ಮೇಲಿನಮನಿ, ಧಾರವಾಡ
ಮುದ್ರಣ : ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್, ಕಾಗದಗೇರಿ ಓಣಿ, ಗದಗ



**ಪೂಜ್ಯ ಶ್ರೀ ಮುರುಘೇಂದ್ರ ಶಿವಯೋಗಿಗಳು**

ಗಚ್ಚಿನಮಠ, ಅಥಣಿ



**ಪೂಜ್ಯ ಶ್ರೀ ಮ.ನಿ.ಪ್ರ. ಮೃತ್ಯುಂಜಯ ಅಪ್ಪಗಳು**

ಶ್ರೀ ಮುರುಘಾಮಠ, ಧಾರವಾಡ



**ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತ ಅಪ್ಪಗಳು**
ಶ್ರೀ ಮುರುಘಾಮಠ, ಧಾರವಾಡ



**ಪೂಜ್ಯ ಶ್ರೀ ಮ.ನಿ.ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು**
ಶ್ರೀ ಮುರುಘಾಮಠ, ಧಾರವಾಡ

## ಗ್ರಂಥ ದಾಸೋಹ



ಲಿಂ. ಶ್ರೀಮತಿ ಗಂಗವ್ವ ಚೆನ್ನಪ್ಪ ಬಾಳಗಿ
ಇವರ ಸ್ಮರಣಾರ್ಥ
ಶ್ರೀ ಮಲ್ಲಿಕಾರ್ಜುನ ಚೆನ್ನಪ್ಪ ಬಾಳಗಿ
ಹಿರೇಮಠ ಓಣಿ
ಕಮಲಾಪುರ, ಧಾರವಾಡ



## ಪ್ರಕಾಶಕರ ನುಡಿ

ಧಾರವಾಡ ಶ್ರೀಮಂತ ಸಾಹಿತ್ಯ–ಸಂಸ್ಕೃತಿ ಪರಂಪರೆ ಹೊಂದಿದ ಮಹಾನಗರ. ಇದರ ಘನತೆ ಗೌರವಗಳನ್ನು ಹೆಚ್ಚಿಸಿದ ಧಾರ್ಮಿಕ ಶ್ರದ್ಧಾಕೇಂದ್ರ ಮುರುಘಾಮಠ. ಮೃತ್ಯುಂಜಯ ಅಪ್ಪಗಳು ಅದರ ಕ್ರಿಯಾಶಕ್ತಿ; ಮಹಾಂತ ಅಪ್ಪಗಳು ಅದರ ಶ್ರೇಯೋಮೂರ್ತಿ. ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ, ಅಖಿಲಭಾರತ ಶಿವಾನುಭವ ಸಂಸ್ಥೆ, ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ ಅದರ ಮೂರು ಕಣ್ಣುಗಳು. ಅನ್ನದಾಸೋಹ; ಜ್ಞಾನದಾಸೋಹ, ಅನುಭಾವ ದಾಸೋಹ ಇಲ್ಲಿ ನಿರಂತರ ನಡೆಯುವ ತ್ರಿವಿಧ ದಾಸೋಹಗಳು. ಬಡ ವಿದ್ಯಾರ್ಥಿಗಳ ಭವಿಷ್ಯದ ಉಜ್ವಲತೆ, ಸ್ವಸ್ಥ ಸುಂದರ ಸಮಾಜದ ನಿರ್ಮಾಣ, ಶ್ರೀಮಂತ ಶರಣ ಸಾಹಿತ್ಯ–ಸಂಸ್ಕೃತಿ ಪ್ರಸಾರ ಇವು ಶ್ರೀಮಠದ ತ್ರಿವಿಧ ಮಹಾಮಣಿಹಗಳು.

ಶ್ರೀಮಠವನ್ನು ಕಟ್ಟಿ ಬೆಳೆಸಿದ ಉಭಯ ಶ್ರೀಗಳು ಬಸವತತ್ವಗಳನ್ನು ತಮ್ಮ ಜೀವನದ ಉಸಿರನ್ನಾಗಿಸಿಕೊಂಡು ಬದುಕಿದ ಮಹಾತ್ಮರು. ಬಸವತತ್ವಗಳನ್ನು ಪ್ರಸಾರಪಡಿಸುವುದಕ್ಕಾಗಿಯೇ ತಮ್ಮ ಬದುಕನ್ನು ಸವೆಸಿದ ಮಹಾಂತರು. ಶರಣಸಾಹಿತ್ಯ ಅವರ ಪಂಚಪ್ರಾಣ. ನೆಲದ ಮರೆಯ ನಿಧಾನದಂತೆ ಹಸ್ತಪ್ರತಿಗಳಲ್ಲಿ ಅಡಗಿ ಕುಳಿತಿದ್ದ ಅದನ್ನು ಪ್ರಕಟಿಸಿ ಪ್ರಸಾರಗೊಳಿಸಬೇಕೆಂಬುದು ಅವರ ಮನದ ಉತ್ಕಟ ಹಂಬಲ. ಅದನ್ನು ಸಾಕಾರಗೊಳಿಸಲೆಂದು ಶ್ರೀಮಠದಲ್ಲಿ ಅಸ್ತಿತ್ವಕ್ಕೆ ಬಂದುದು 'ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ'.

೧೯೪೭ ರಲ್ಲಿ ಬಾಲಲೀಲಾ ಮಹಾಂತ ಶಿವಯೋಗಿಗಳ 'ಕೈವಲ್ಯದರ್ಪಣ' ಕೃತಿ ಪ್ರಕಟಣೆಯೊಂದಿಗೆ ಆರಂಭವಾದ ಈ ಗ್ರಂಥಮಾಲೆಯ ಅಡಿಯಲ್ಲಿ ಇದುವರೆಗೆ ಇನ್ನೂರಕ್ಕೂ ಹೆಚ್ಚು ಕೃತಿಗಳು ಬೆಳಕುಕಂಡಿವೆ. ಬಸವಜಯಂತಿ ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟಿಸಿದ 'ಯುಗ ಯುಗದ ಉತ್ಸಾಹ' ಎಂಬ ಸಾವಿರ ಪುಟದ ಬೃಹತ್ ಗ್ರಂಥ, ಪೂಜ್ಯ ಮಹಾಂತಪ್ಪಗಳ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟಿಸಿದ 'ಮಹಾಂತ ಬೆಳಗು' ಎಂಬ ಉದ್ಗ್ರಂಥ ಈ ಮಾಲೆಯ ಹೆಮ್ಮೆಯ ಕೊಡುಗೆಗಳೆನಿಸಿವೆ.

ಈಗ ಈ ಮಾಲೆ ಕೈಕೊಂಡ ಮತ್ತೊಂದು ಐತಿಹಾಸಿಕ ಮಹತ್ವದ ಬೃಹತ್ ಯೋಜನೆ 'ಶ್ರೀ ಮ.ನಿ.ಜ. ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ'ದ ಶತಮಾನೋತ್ಸವ ನೆನಪಿನ ನೂರೊಂದು ಗ್ರಂಥಗಳ ಪ್ರಕಟಣೆ.

ಮುರುಘಾಮಠದ ಉಚಿತ ಪ್ರಸಾದ ನಿಲಯ ಅನೇಕ ಸಾವಿರ ಬಡ ವಿದ್ಯಾರ್ಥಿಗಳ ಬಾಳಿಗೆ ಬೆಳಕನ್ನು ನೀಡಿದ ದಾರಿದೀಪ. ಪೂಜ್ಯ ಮೃತ್ಯುಂಜಯ ಅಪ್ಪಗಳ ಮಾನವೀಯ ಅಂತಃಕರಣ, ಶಿಕ್ಷಣಪ್ರೀತಿ, ವಿದ್ಯಾರ್ಥಿ ವಾತ್ಸಲ್ಯ ಕಾರಣವಾಗಿ ೧೯೧೭ ರಲ್ಲಿ ಸ್ಥಾಪಿತವಾದ ಇದು ಈ ಭಾಗದ ಗ್ರಾಮೀಣ ಬಡ ವಿದ್ಯಾರ್ಥಿಗಳ ಆಶಾಕಿರಣವಾಗಿ, ಉಜ್ವಲ ಭವಿಷ್ಯ ರೂಪಿಸುವ ಮಹಾಮನೆಯಾಗಿ ಕಾರ್ಯಮಾಡುತ್ತ ಬಂದಿದೆ. ಇಲ್ಲಿ ಪ್ರಸಾದ ಸ್ವೀಕರಿಸಿ ಅಧ್ಯಯನ ಮಾಡಿದ ಅನೇಕ ವಿದ್ಯಾರ್ಥಿಗಳು ಉನ್ನತ ಹುದ್ದೆ, ಸ್ಥಾನಮಾನಗಳನ್ನು ಪಡೆದು ನಾಡಿಗೆ ಹೆಸರನ್ನು ತಂದಿದ್ದಾರೆ. ಕನ್ನಡ ನಾಡಿನ ತುಂಬ ಮಠ ಮಾನ್ಯಗಳು ಉಚಿತ ಪ್ರಸಾದ ನಿಲಯ ಆರಂಭಿಸಲು ಪ್ರೇರಣೆ ನೀಡಿದ ಇದು ನಾಡಿನ ಶೈಕ್ಷಣಿಕ ಪ್ರಗತಿಗೆ ನಾಂದಿ ಹಾಡಿದ ಕೀರ್ತಿಗೆ ಭಾಜನವಾಗಿದೆ. ಈ ಸಂಸ್ಥೆ ಈಗ ತನ್ನ ನೂರು ವರ್ಷದ ಸಾರ್ಥಕ ಸೇವೆಯನ್ನು ಪೂರೈಸಿ ಮುನ್ನಡೆದಿದೆ. ಇದರ ಶತಮಾನೋತ್ಸವವನ್ನು ಹಲವು ಅರ್ಥಪೂರ್ಣ ಯೋಜನೆಗಳನ್ನು ಹಾಕಿಕೊಳ್ಳುವ ಮೂಲಕ ಆಚರಿಸಲು ಶ್ರೀಮಠದ ಆಡಳಿತ ಮಂಡಳಿ ಮುಂದಾಗಿದೆ. ಅದರಲ್ಲಿ ಗ್ರಂಥ ಪ್ರಕಟಣೆಗೆ ವಿಶೇಷ ಆದ್ಯತೆ ನೀಡಲಾಗಿದೆ. ನೂರೊಂದು ಮೌಲಿಕ ಗ್ರಂಥಗಳು, ಒಂದು ಬೃಹತ್ ಸ್ಮರಣ ಸಂಪುಟ, ಒಂದು ಪ್ರಸಾದ ನಿಲಯದ ವಿದ್ಯಾರ್ಥಿಗಳ ಸೂಚಿ–ಈ ಯೋಜನೆಯ ಅಡಿಯಲ್ಲಿ ಪ್ರಕಟವಾಗುತ್ತಿರುವುದು ಸಂತಸದ ಸಂಗತಿ. ಮುರುಘಾಮಠ ಮೊದಲಿನಿಂದಲೂ ಗ್ರಂಥ ಪ್ರಕಟಣೆಯಲ್ಲಿ ವಿಶೇಷ ಆಸಕ್ತಿ ತೋರಿಸುತ್ತ ಬಂದಿದೆ. ಅದರ ಮುಂದುವರಿಕೆಯಾಗಿ ಈ ಯೋಜನೆ ರೂಪುಗೊಂಡಿದೆ.

ಈ ಬಹುದೊಡ್ಡ ಯೋಜನೆಗೆ ರೂಪರೇಷೆ ಹಾಕಿದವರು ನಮ್ಮ ನಾಡಿನ ಹಿರಿಯ ವಚನ ಸಾಹಿತ್ಯ ಸಂಶೋಧಕರೂ ಶ್ರೀ ಮಠದ ಈ ಹಿಂದಿನ ಗ್ರಂಥಪ್ರಕಟನ ಯೋಜನೆಯ ನಿರ್ದೇಶಕರೂ ಆಗಿರುವ ಡಾ. ವೀರಣ್ಣ ರಾಜೂರ ಮತ್ತು ಅವರ ಆತ್ಮೀಯ ಸ್ನೇಹಿತರಾದ ಶ್ರೀ ಬಸವರಾಜ ಹೂಗಾರ ಅವರು, ತುಂಬ ಪರಿಶ್ರಮ–ತಾಳ್ಮೆ–ಜಾಣ್ಮೆವಹಿಸಿ ಈ ಕಾರ್ಯವನ್ನು ಅಚ್ಚುಕಟ್ಟಾಗಿ ನೆರವೇರಿಸಿ ಮುರುಘಾಮಠದ ಗ್ರಂಥ ಪ್ರಕಟಣೆ ಇತಿಹಾಸದಲ್ಲಿ ಒಂದು ನೂತನ ಮೈಲುಗಲ್ಲು ಸ್ಥಾಪಿಸಲು ಕಾರಣರಾದ ಈ ಇಬ್ಬರೂ ಸಾಹಿತ್ಯ ಸಾಧಕರಿಗೆ ಶಿವಯೋಗಿತ್ರಯರು ಶುಭಾಶೀರ್ವಾದ ನೀಡಲೆಂದು ಬಯಸುತ್ತೇವೆ.

ಗ್ರಂಥ ಪ್ರಕಟಣೆ ಇಂದು ತುಂಬ ವೆಚ್ಚವನ್ನು ಅಪೇಕ್ಷಿಸುವ ಕಾರ್ಯ. ಅದನ್ನು ಸುಲಭಗೊಳಿಸಿದವರು ಶ್ರೀಮಠದ ಸದ್ಭಕ್ತರು. ಅವರ ಉದಾರ ನೆರವು ಇಲ್ಲದಿದ್ದರೆ ಇಂಥ ದೊಡ್ಡ ಗಾತ್ರದ ಗ್ರಂಥಗಳ ದೊಡ್ಡ ಯೋಜನೆಯನ್ನು ಯಶಸ್ವಿಯಾಗಿ ಪೂರೈಸಲು ಸಾಧ್ಯವಾಗುತ್ತಿರಲಿಲ್ಲ. ಕಾರಣ ಗ್ರಂಥ ದಾಸೋಹ ನೀಡಿದ ಎಲ್ಲ ಹೃದಯ ಶ್ರೀಮಂತರಿಗೆ ಮೃತ್ಯುಂಜಯ–ಮಹಾಂತಪ್ಪಗಳ ಕೃಪಾಶೀರ್ವಾದ ಸದಾ ಇರಲಿ ಎಂದು ಹಾರೈಸುತ್ತೇವೆ.

ಗ್ರಂಥ ಪ್ರಕಟಣೆಗೆ ಸಂಬಂಧಿಸಿದ ಡಿ.ಟಿ.ಪಿ, ಮುಖ ಪುಟ ವಿನ್ಯಾಸ, ಮುದ್ರಣ ಇತ್ಯಾದಿ ಎಲ್ಲ ಕಾರ್ಯಗಳನ್ನು ತುಂಬ ಅಚ್ಚುಕಟ್ಟಾಗಿ ಪೂರೈಸಿದ ಡಾ. ಹನುಮಂತ ಮೇಲಿನಮನಿ, ಡಾ. ಸರಸ್ವತಿ ಭಗವತಿ; ಶ್ರೀ ಬಿ. ಮಾರುತಿ, ಶ್ರೀ ಕೆ. ಅಶೋಕ ಮೊದಲಾದವರಿಗೆ ಬಸವಾದಿ ಶರಣರ ಕೃಪಾಶೀರ್ವಾದ ನಿರಂತರವಾಗಿರಲೆಂದು ಬಯಸುತ್ತೇವೆ.

೨೮–೯–೨೦೧೭ – ಪ್ರಕಾಶಕರು





## ಪ್ರಧಾನ ಸಂಪಾದಕರ ನುಡಿ

**ಶ್ರೀ ಮುರುಘಾಮಠ :**

ಸಕಲ ಜೀವಾತ್ಮರ ಲೇಸನ್ನೇ ತನ್ನ ಪರಮಧ್ಯೇಯವನ್ನಾಗಿರಿಸಿಕೊಂಡು ಉದಿಸಿದ ಶರಣಧರ್ಮ ಉನ್ನತ ತತ್ವ- ಸಿದ್ಧಾಂತ-ಮೌಲ್ಯ-ಆದರ್ಶಗಳ ಕೂಡಲಸಂಗಮ. ಅರಿವು-ಆಚಾರ-ಅನುಭಾವ-ಕಾಯಕ-ದಾಸೋಹ ಇದರ ಪ್ರಾಣಜೀವಾಳ. ಇದರ ಪರಂಪರೆ ಉಜ್ವಲ; ಸಂಸ್ಕೃತಿ ನಿರ್ಮಲ; ಆಶಯ ಲೋಕೋತ್ತರ; ಖ್ಯಾತಿ ವಿಶ್ವಮಾನ್ಯ; ನೀತಿ ನಿತ್ಯನಿರಂಜನ.

ಇಂಥ ಅನನ್ಯ ಶರಣ ಸಂಸ್ಕೃತಿ ಪರಂಪರೆಯನ್ನು ಆಧುನಿಕ ಕಾಲದಲ್ಲಿ ನಿಷ್ಠೆಯಿಂದ ನಿರ್ವಹಿಸಿಕೊಂಡು ನಡೆದ ಧಾರ್ಮಿಕ ಸಂಸ್ಥೆಗಳಲ್ಲಿ ಕರ್ನಾಟಕದ ಲಿಂಗಾಯತ ಮಠಗಳ ಪಾತ್ರ ಮಹತ್ತರವಾದುದು. ಅವುಗಳಲ್ಲಿ ಧಾರವಾಡದ ಹೆಮ್ಮೆ ಎನಿಸಿದ ಶ್ರೀ ಮುರುಘಾಮಠದ ಹೆಸರು ಅಗ್ರಗಣ್ಯವೆನಿಸಿದೆ.

ಶ್ರೀ ಮುರುಘಾಮಠ ಸು. ಇನ್ನೂರಾ ಐವತ್ತು ವರ್ಷಗಳ ಶ್ರೀಮಂತ ಪರಂಪರೆಯನ್ನು ಹೊಂದಿದ ಒಂದು ಧಾರ್ಮಿಕ ಶ್ರದ್ಧಾಕೇಂದ್ರ. ಶೂನ್ಯಪೀಠ ಪರಂಪರೆಯ ಮುರುಘಾ ಸಮಯಕ್ಕೆ ಸೇರಿದ ಇದು ಪೇಶ್ವೆಯವರ ಆಳ್ವಿಕೆಯ ಕಾಲಕ್ಕೆ (೧೭೪೦) ಇಮ್ಮಡಿ ಮುರಿಗಾ ಗುರುಸಿದ್ಧರ ಶಿಷ್ಯರಾದ ಶ್ರೀ ರುದ್ರಮುನಿ ಸ್ವಾಮಿಗಳಿಂದ ಸ್ಥಾಪಿತವಾಯಿತೆಂದು ಹೇಳಲಾಗುತ್ತದೆ. ಆದರೆ ಅಲ್ಲಿಂದ ಮುಂದಿನ ನೂರಾ ಐವತ್ತು ವರ್ಷಗಳ ಇದರ ಇತಿಹಾಸ ಕಾಲನ ಗರ್ಭದಲ್ಲಿ ಅಡಗಿಹೋಗಿದೆ.

ಕೇವಲ ಒಂದು ಸಣ್ಣ ಮುರುಕು ಮಂಟಪ, ಸುತ್ತಲೂ ಮುಳ್ಳುಕಂಟಿಗಳಿಂದ ಆವೃತವಾಗಿ ಕಗ್ಗಾಡಿನಂತಿದ್ದ ಈ ಮಠಕ್ಕೆ ಕಾಯಕಲ್ಪ ನೀಡಿ-ಮರುಜೀವ ತುಂಬಿ ಅದನ್ನು ಉತ್ತರೋತ್ತರವಾಗಿ ಬೆಳೆಸಿ, ಅದರ ಕೀರ್ತಿಯನ್ನು ಉತ್ತುಂಗಕ್ಕೇರಿಸಿದವರು ೧೯೧೭ ರಲ್ಲಿ ಶ್ರೀ ಮಠದ ಅಧಿಕಾರವನ್ನು ವಹಿಸಿಕೊಂಡ ಅಮೃತಹೃದಯಿ

ಪೂಜ್ಯ ಶ್ರೀ ಮೃತ್ಯುಂಜಯ ಅಪ್ಪಗಳವರು. ಅದನ್ನು ಇನ್ನಷ್ಟು ಎರೆತ್ತರಕ್ಕೆ ಕೊಂಡೊಯ್ದು ಜಾಜ್ವಲ್ಯಮಾನವಾಗಿ ಬೆಳಗಿಸಿದವರು ಮಾತೃಹೃದಯದ ಪೂಜ್ಯ ಶ್ರೀ ಮಹಾಂತ ಅಪ್ಪಗಳವರು.

ಮೃತ್ಯುಂಜಯ ಅಪ್ಪಗಳ ಸಂಕಲ್ಪ ಶಕ್ತಿ ಮತ್ತು ಮಹಾಂತ ಅಪ್ಪಗಳ ಕ್ರಿಯಾಶಕ್ತಿ ಸಮ್ಮಿಲನಗೊಂಡು ಶ್ರೀಮಠದಲ್ಲಿ ಅನೇಕ ವಿಧಾಯಕ ಕಾರ್ಯಯೋಜನೆಗಳು ರೂಪುಗೊಂಡವು.

೧. ಬಡವರು-ದೀನದಲಿತರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶ್ರೀ ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ, ವಿದ್ಯಾರ್ಥಿಗಳ ವಾಸಕ್ಕಾಗಿ ಅರವತ್ಮೂರು ಪುರಾತನರ ಹೆಸರಿನಲ್ಲಿ ವಸತಿ ನಿಲಯಗಳ ಸ್ಥಾಪನೆಯಾಯಿತು.

೨. ಶರಣಧರ್ಮ-ತತ್ವ-ಮೌಲ್ಯಗಳ ಪ್ರಸಾರಕ್ಕಾಗಿ ಅಖಿಲಭಾರತ ಶಿವಾನುಭವ ಸಂಸ್ಥೆ, ಶಿವಾನುಭವ ಪರೀಕ್ಷೆಗಳಿಗೆ ಚಾಲನೆ ದೊರೆಯಿತು.

೩. ಶರಣ ಸಾಹಿತ್ಯ ಪ್ರಕಟಣೆ-ಪ್ರಸಾರಕ್ಕಾಗಿ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ, 'ಸಾವಧಾನ' ಪತ್ರಿಕೆ ಆರಂಭವಾದವು.

೪. ಶರಣ ಸಂಸ್ಕೃತಿ ಪ್ರಸಾರಕ್ಕಾಗಿ ಶಿವಯೋಗಿಗಳ ರಥೋತ್ಸವ, ಶ್ರಾವಣ ಮಾಸದ ಪುರಾಣ-ಪ್ರವಚನ-ಉಪನ್ಯಾಸ-ಸಂಗೀತ ಕಾರ್ಯಕ್ರಮಗಳಿಗೆ ಉತ್ತೇಜನ ಉಂಟಾಯಿತು.

ಹೀಗೆ ಅನ್ನದಾಸೋಹ, ಜ್ಞಾನದಾಸೋಹ, ಅನುಭಾವದಾಸೋಹಗಳ ತ್ರಿವೇಣಿ ಸಂಗಮವೆನಿಸಿ ಶ್ರೀ ಮುರುಘಾಮಠ ಕರ್ನಾಟಕದ ಸುಪ್ರಸಿದ್ಧ ಪವಿತ್ರ ತಾಣವಾಗಿ ಖ್ಯಾತಿಗಳಿಸಿತು. ನಾಡಿನ ಭಕ್ತ ಕುಲಕೋಟಿಯ ಹೃನ್ಮನಗಳನ್ನು ನಿರಂತರ ತನ್ನತ್ತ ಸೆಳೆದುಕೊಳ್ಳುತ್ತ ನೆಮ್ಮದಿಯ ನೆಲೆಯಾಗಿ, ಶಾಂತಿಯ ನಿಕೇತನವಾಗಿ ಪರಿಣಮಿಸಿತು.

**ಶ್ರೀ ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ :**

'ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ' ಪೂಜ್ಯ ಶ್ರೀ ಮೃತ್ಯುಂಜಯ ಅಪ್ಪಗಳ ಕಾರುಣ್ಯದ ಕೂಸು. ಅವರು ಶ್ರೀಮಠದ ಅಧಿಕಾರ ವಹಿಸಿಕೊಂಡ ಐದೂವರೆ ತಿಂಗಳ ಅವಧಿಯಲ್ಲಿ ಮೊದಲು ಮಾಡಿದ ಮಹತ್ಕಾರ್ಯವೇ ಪ್ರಸಾದನಿಲಯದ ಸ್ಥಾಪನೆ (೨೭-೩-೧೯೧೭). ಅವರ ಲೋಕಕಲ್ಯಾಣ ಪುರುಷದೃಷ್ಟಿ, ಸಕಲ ಜೀವಾವಳಿಯ ಬಗೆಗೆ ಅವರಲ್ಲಿದ್ದ ಅಪಾರವಾದ ಅಂತಃಕರಣ-ಅನುಕಂಪಗಳೇ ಈ ಪ್ರಸಾದ ನಿಲಯದ ಹುಟ್ಟಿಗೆ ಕಾರಣವಾದವು.

ಆರಂಭಕಾಲದಲ್ಲಿ ಪ್ರಸಾದ ನಿಲಯ ನಡೆಸಲು ಪೂಜ್ಯರು ಪಟ್ಟ ಪರಿಶ್ರಮ ಅಪರಿಮಿತ. ಹಳ್ಳಿ ಹಳ್ಳಿಗೆ ಹೋಗಿ ಪಾದಚಾರಿಗಳಾಗಿ ಸಂಚರಿಸಿ ಧನ-ಧಾನ್ಯ

ಸಂಗ್ರಹಿಸಿದರು. ವಿದ್ಯಾರ್ಥಿಗಳಿಗೆ ಯಾವುದೇ ರೀತಿಯ ಕೊರತೆಯಾಗದಂತೆ ನೋಡಿಕೊಂಡರು.

ಮೃತ್ಯುಂಜಯಪ್ಪಗಳಿಗೆ ವಿದ್ಯಾರ್ಥಿಗಳೇ ಸರ್ವಸ್ವವಾಗಿದ್ದರು. ಅವರ ಉಜ್ವಲ ಭವಿಷ್ಯ ಜೀವನ ರೂಪಿಸುವುದೇ ಅವರ ಮಹಾಮಣಿಹವಾಗಿತ್ತು. ವಿದ್ಯಾರ್ಥಿಗಳ ಹೊಟ್ಟೆಗೆ ಪ್ರಸಾದ, ನೆತ್ತಿಗೆ ಜ್ಞಾನ, ಹೃದಯಕ್ಕೆ ಸಂಸ್ಕಾರ ನೀಡಿ ಶ್ರೇಷ್ಠ ಪ್ರಜೆಗಳನ್ನಾಗಿ ಮಾಡಿದರು. ಅನೇಕ-ಸಾವಿರ ವಿದ್ಯಾರ್ಥಿಗಳು ಈ ಪ್ರಸಾದ ನಿಲಯದಲ್ಲಿದ್ದು ಪ್ರಸಾದ ಪಡೆದು ವಿದ್ಯಾರ್ಜನೆ ಮಾಡಿದ್ದಾರೆ. ಇಲ್ಲಿ ಕಲಿತ ವಿದ್ಯಾರ್ಥಿಗಳು ವಿವಿಧ ಕ್ಷೇತ್ರಗಳಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿ ಕೀರ್ತಿಗಳಿಸಿದ್ದಾರೆ. ರಾಷ್ಟ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿ ಶ್ರೀಮಠದ ಹೆಸರನ್ನು ಬೆಳಗಿಸಿ ತಮ್ಮ ಬದುಕನ್ನು ಸಾರ್ಥಕಪಡಿಸಿಕೊಂಡಿದ್ದಾರೆ. ಮೃತ್ಯುಂಜಯ ಅಪ್ಪಗಳು ಆರಂಭಿಸಿದ ಈ ಪ್ರಸಾದ ನಿಲಯವೇ ಮುಂದೆ ಕರ್ನಾಟಕದಲ್ಲಿ ಅನೇಕ ಪ್ರಸಾದ ನಿಲಯಗಳು ಹುಟ್ಟಿಕೊಳ್ಳಲು ಪ್ರೇರಣೆ ನೀಡಿತೆಂಬುದು ಒಂದು ಐತಿಹಾಸಿಕ ಮಹತ್ವದ ಸ್ಮರಣೀಯ ಸಂಗತಿಯಾಗಿದೆ.

**ಪ್ರಸಾದ ನಿಲಯದ ಶತಮಾನೋತ್ಸವ :**

೨೦೧೭ ಮುರುಘರಾಜೇಂದ್ರ ಪ್ರಸಾದ ನಿಲಯದ ಶತಮಾನೋತ್ಸವ ವರ್ಷ. ನೂರು ವರ್ಷದ ಈ ಸಾರ್ಥಕ ಸಂದರ್ಭವನ್ನು ಅರ್ಥಪೂರ್ಣ ಯೋಜನೆಗಳ ಮೂಲಕ ಸ್ಮರಣೀಯವಾಗಿಸಲು ಶ್ರೀಮಠದ ಇಂದಿನ ಪೂಜ್ಯರಾದ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು-ಶ್ರೀಮಠದ ಆಡಳಿತ ಮಂಡಳಿಯ ಎಲ್ಲ ಸದಸ್ಯರು ಹಾಗೂ ಸಕಲ ಸದ್ಭಕ್ತರ ಸಹಕಾರದೊಂದಿಗೆ-ಸಂಕಲ್ಪ ಮಾಡಿದ್ದಾರೆ.

ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ತ್ರಿವಿಧ ದಾಸೋಹಿಗಳು. ಅಧ್ಯಯನ-ಅನುಷ್ಠಾನ-ಚಿಂತನ-ಮನನಗಳಿಂದ ಗಟ್ಟಿಗೊಂಡ ಸಾತ್ವಿಕ ಶೀಲಸಂಪನ್ನರು; ಪ್ರವಚನಾಚಾರ್ಯರು; ಸಾಹಿತ್ಯ ಪ್ರೇಮಿಗಳು. ಉತ್ಸಾಹ-ದೂರ ದೃಷ್ಟಿ-ಕ್ರಿಯಾಶೀಲತೆ-ಕಾರ್ಯದಕ್ಷತೆ-ಬದ್ಧತೆ ಅವರ ವ್ಯಕ್ತಿತ್ವದ ವಿಶಿಷ್ಟ ಲಕ್ಷಣಗಳು. ಸದಾ ಹೊಸದನ್ನು ಮಾಡಬೇಕು, ಅದ್ದೂರಿಯಾಗಿ ಮಾಡಬೇಕು, ಅರ್ಥಪೂರ್ಣವಾಗಿ ಮಾಡಬೇಕು, ಅದರಿಂದ ಸಮಾಜಕ್ಕೆ, ಲೋಕಕ್ಕೆ ಒಳಿತಾಗಬೇಕು ಎಂಬ ಉತ್ಕಟ ಹಂಬಲ; ಅದಕ್ಕೆ ಮೃತ್ಯುಂಜಯಪ್ಪ-ಮಹಾಂತಪ್ಪಗಳ ಆಶೀರ್ವಾದದ ಬೆಂಬಲ.

ಹೀಗಾಗಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಮುರುಘಾಮಠದ ಕರ್ಣಧಾರತ್ವವನ್ನು ವಹಿಸಿಕೊಂಡ ನಂತರ ಶ್ರೀಮಠದ ಕಾರ್ಯ ಚಟುವಟಿಕೆಗಳಿಗೆಲ್ಲ ಹೊಸ ಚೈತನ್ಯ ಮೂಡಿತು. ಭೌತಿಕ ಮತ್ತು ಬೌದ್ಧಿಕ ಎರಡೂ ವಲಯಗಳಲ್ಲಿ ಅನೇಕ ಪ್ರಗತಿ ಕಾರ್ಯಗಳು ಕಣ್ತೆರೆದುಕೊಂಡವು. ನೂತನ ದಾಸೋಹ ಭವನ

ಪೂರ್ಣಗೊಂಡಿತು. ಮಠದ ಒಳ ಆವರಣ ನವೀಕರಣ ತಾಳಿತು. ಮಹಾಂತಪ್ಪಗಳ ಅಮೃತ-ಶಿಲಾಮೂರ್ತಿ ಪ್ರತಿಷ್ಠಾಪನೆಯಾಯಿತು. ಶ್ರಾವಣಮಾಸದ ಕಾರ್ಯಕ್ರಮಗಳು ಹೊಸರೂಪ ಪಡೆದವು. 'ಸಾವಧಾನ' ಪತ್ರಿಕೆಗೆ ಮರುಜೀವ ಬಂದಿತು. ಶಿವಯೋಗಿಗಳ ಜಾತ್ರಾ ಮಹೋತ್ಸವ ಧಾರ್ಮಿಕ-ಸಾಹಿತ್ಯಿಕ-ಸಾಂಸ್ಕೃತಿಕ ಕಾರ್ಯಕ್ರಮಗಳ ತ್ರಿವೇಣಿ ಎನಿಸಿತು. ಗ್ರಂಥ ಪ್ರಕಟಣೆ ಗರಿಗೆದರಿತು. ಮೃತ್ಯುಂಜಯ-ಮಹಂತ ಪ್ರಶಸ್ತಿ ಸ್ಥಾಪನೆಗೊಂಡಿತು. ಬಸವ ಜಯಂತಿ ಶತಮಾನೋತ್ಸವ ಅರ್ಥಪೂರ್ಣವಾಗಿ ಆಚರಿಸಲ್ಪಟ್ಟಿತು. ಅಖಿಲಭಾರತ ೧೧ನೆಯ ಶರಣ ಸಾಹಿತ್ಯ ಸಮ್ಮೇಲನ ಯಶಸ್ವಿಯಾಗಿ ಜರುಗಿತು. ಪೂಜ್ಯ ಮಹಾಂತಪ್ಪಗಳ ಜನ್ಮ ಶತಮಾನೋತ್ಸವ ವೈಭವೋಪೇತವಾಗಿ ನೆರವೇರಿತು.

ಈಗ ಪೂಜ್ಯರು ಹಮ್ಮಿಕೊಂಡಿರುವ ಮತ್ತೊಂದು ಮಹತ್ವಾಕಾಂಕ್ಷೆಯ ಮಹತ್ಕಾರ್ಯ ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯದ ಶತಮಾನೋತ್ಸವ. ಇದರ ಅಂಗವಾಗಿ ಈ ಕೆಳಗಿನ ಮಹತ್ವದ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.

೧. ಈಗಿರುವ ನೂತನ ಪ್ರಸಾದ ನಿಲಯದ ಮೇಲೆ ಸುಸಜ್ಜಿತವಾದ ವಿಶಾಲ-ಸುಂದರ ಸಭಾಭವನವನ್ನು ನಿರ್ಮಿಸುವುದು.

೨. ಮಠದ ಮುಂಭಾಗದಲ್ಲಿ ಕಲಾತ್ಮಕವಾದ ಭವ್ಯ ಮಹಾದ್ವಾರ ಕಟ್ಟಿಸಿ, ಅದರ ಶಿರೋಭಾಗದಲ್ಲಿ ಮಹಾಮಾನವತಾವಾದಿ ಬಸವಣ್ಣನವರ ಅಮೃತಶಿಲಾ ಮೂರ್ತಿಯನ್ನು ಪ್ರತಿಷ್ಠಾಪಿಸುವುದು.

೩. ಶತಮಾನೋತ್ಸವ ಸಂಕೇತವಾಗಿ ಶರಣಧರ್ಮ-ಸಾಹಿತ್ಯ-ಸಂಸ್ಕೃತಿ ಕುರಿತ ನೂರೊಂದು ಮೌಲಿಕ ಗ್ರಂಥಗಳನ್ನು ಪ್ರಕಟಿಸಿ ಏಕಕಾಲಕ್ಕೆ ಬಿಡುಗಡೆಗೊಳಿಸುವುದು.

೪. ಪ್ರಸಾದ ನಿಲಯದ ನೂರುವರ್ಷದ ನೆನಪಿಗಾಗಿ ಕರ್ನಾಟಕದ ನೂರು ಪ್ರಸಾದ ನಿಲಯಗಳ ಧಾರ್ಮಿಕ-ಸಾಮಾಜಿಕ-ಶೈಕ್ಷಣಿಕ-ಸಾಂಸ್ಕೃತಿಕ ಕೊಡುಗೆಗಳನ್ನು ತಿಳಿಸುವ ನೂರು ಲೇಖನಗಳನ್ನೊಳಗೊಂಡ ಬೃಹತ್ ಸ್ಮರಣ ಸಂಪುಟವೊಂದನ್ನು ಹೊರತರುವುದು.

೫. ನೂರು ವರ್ಷದ ಅವಧಿಯಲ್ಲಿ ಪ್ರಸಾದ ನಿಲಯದಲ್ಲಿದ್ದು ಅಧ್ಯಯನ ಮಾಡಿದ ವಿದ್ಯಾರ್ಥಿಗಳ ಸಮಗ್ರ ಸೂಚಿಯೊಂದನ್ನು ಪ್ರಕಟಿಸುವುದು.

೬. ಒಂದು ವರ್ಷ ಕಾಲ (ಜನೇವರಿ ೨೦೧೭ ರಿಂದ ಆರಂಭಿಸಿ)ನಾಡಿನ ಬೇರೆ ಬೇರೆ ಕಡೆಗಳಲ್ಲಿ ಮತ್ತು ಶ್ರೀಮಠದಲ್ಲಿ ಶರಣತತ್ವ ಬಿಂಬಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೭. ಜನೇವರಿ ೨೦೧೮ ರಲ್ಲಿ ಶತಮಾನೋತ್ಸವದ ಸಮಾರೋಪ ಸಮಾರಂಭವನ್ನು ರಾಷ್ಟ್ರದ ಗಣ್ಯ ವ್ಯಕ್ತಿಗಳು ಹಾಗೂ ಪೂಜ್ಯರ ಸಾನ್ನಿಧ್ಯದಲ್ಲಿ ನೆರವೇರಿಸುವುದು.

ಸುಮಾರು ೫ ರಿಂದ ೬ ಕೋಟಿ ರೂ. ವೆಚ್ಚದ ಈ ಎಲ್ಲ ಯೋಜನೆಗಳು ಯಶಸ್ವಿಯಾಗಿ ಕಾರ್ಯರೂಪಕ್ಕೆ ಬರುವಲ್ಲಿ ನಾಡಿನ ಸಕಲ ಸದ್ಭಕ್ತರ ಸಕ್ರಿಯ ಸಹಕಾರ ಅತ್ಯಗತ್ಯವಾಗಿದೆ. ಸಂಕಲ್ಪಿತ ಈ ಸಮಾರಂಭ ಶ್ರೀಮಠದ ಚರಿತ್ರೆಯಲ್ಲಿ ಒಂದು ಐತಿಹಾಸಿಕ ಘಟನೆಯಾಗಿ ಅಚ್ಚಳಿಯದೆ ದಾಖಲೆಗೊಳ್ಳುವಂತೆ ಮಾಡಲು ತಮ್ಮನ್ನು ಸಮರ್ಪಿಸಿಕೊಂಡ ಸರ್ವರೂ ಅಭಿನಂದನೆಗೆ ಪಾತ್ರರಾಗಿದ್ದಾರೆ.

**ನೂರೊಂದು ಗ್ರಂಥಗಳು :**

ಪ್ರಸಾದ ನಿಲಯದ ಶತಮಾನೋತ್ಸವ ಸ್ಮರಣೆಗಾಗಿ ಪ್ರಕಟಿಸಲು ಆಯ್ಕೆ ಮಾಡಿದ ಗ್ರಂಥಗಳೆಲ್ಲ ಶರಣಸಾಹಿತ್ಯಕ್ಕೆ ಸಂಬಂಧಿಸಿದುವಾಗಿವೆ. ಇವುಗಳಲ್ಲಿ ಏಕವ್ಯಕ್ತಿ ಷಟ್‌ಸ್ಥಲ ವಚನ ಸಂಪುಟಗಳು, ನಿಶ್ಚಿತ ವಿಷಯ ಕುರಿತ ಅನೇಕವ್ಯಕ್ತಿ ಆಯ್ದ ವಚನ ಸಂಕಲನಗಳು, ಸ್ವರವಚನ ಸಂಪುಟಗಳು, ತಾತ್ವಿಕ ಗ್ರಂಥಗಳು, ಲಿಂಗಾಯತ ಪ್ರಾಚೀನ ಕಾವ್ಯಗಳು, ವಚನ ಸಾಹಿತ್ಯ ಸಂಬಂಧಿ ಏಕವ್ಯಕ್ತಿ ಬಿಡಿ ಲೇಖನ ಸಂಗ್ರಹಗಳು ಸಮಾವೇಶಗೊಂಡಿವೆ. ಕೃತಿಗಳ ಪುಟ ವ್ಯಾಪ್ತಿ ೧೦೦ ರಿಂದ ೫೦೦ ರವರೆಗೆ ವಿಸ್ತರಿಸಿಕೊಂಡಿದೆ. ಇದರಲ್ಲಿ ಕೆಲವು ಮರುಮುದ್ರಣಗಳಾದರೆ, ಮತ್ತೆ ಕೆಲವು ಪ್ರಥಮ ಮುದ್ರಣಗಳೆನಿಸಿವೆ. ಸದಾಕಾಲ ಅಧ್ಯಯನ ಯೋಗ್ಯವಾದ ವಚನ, ಸ್ವರವಚನಗಳಿಗೆ, ಸುಪ್ರಸಿದ್ಧ ವಿದ್ವಾಂಸರು ಬರೆದ ಮೌಲಿಕ ಬಿಡಿ ಬರಹಗಳಿಗೆ, ಬಹುಕಾಲದಿಂದ ಪ್ರಕಟವಾಗದೆ ಸಂಶೋಧಕರಿಗೆ ಅಲಭ್ಯವೆನಿಸಿದ್ದ ಪ್ರಾಚೀನ ಕಾವ್ಯಗಳಿಗೆ ಇಲ್ಲಿ ವಿಶೇಷ ಆದ್ಯತೆ ಕೊಡಲಾಗಿದೆ. ಹೀಗಾಗಿ ಇವು ಕೇವಲ ಸಂಖ್ಯೆಯನ್ನು ಪೂರೈಸಲು ಪ್ರಕಟಿಸಿದ ಸಾಮಾನ್ಯ ಕೃತಿಗಳಾಗಿರದೆ, ಸಂಶೋಧಕರು ಹಾಗೂ ಸಾಮಾನ್ಯ ಓದುಗರು ಉಭಯತರಿಗೂ ತುಂಬ ಉಪಯುಕ್ತವಾದ ಉನ್ನತ ಗುಣಮಟ್ಟದ ರಚನೆಗಳಾಗಿವೆಯೆಂದು ಹೇಳಲು ಬಯಸುತ್ತೇವೆ.

ಇಷ್ಟು ದೊಡ್ಡ ಸಂಖ್ಯೆಯ ಸಾಹಿತ್ಯಿಕ-ಮೌಲಿಕ ಗ್ರಂಥಗಳು ಏಕಕಾಲಕ್ಕೆ ಪ್ರಕಟವಾಗುತ್ತಿರುವುದು ಮುರುಘಾಮಠದ ಗ್ರಂಥ ಪ್ರಕಟಣ ಇತಿಹಾಸದಲ್ಲಿಯೇ ಒಂದು ಅವಿಸ್ಮರಣೀಯ ಅಧ್ಯಾಯ. ಈ ಜ್ಞಾನದಾಸೋಹ ಮಹಾಮಣಿಹದ ರೂವಾರಿಗಳು, ಮಾರ್ಗದರ್ಶಕರು ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು. ಇಂಥ ಒಂದು ಅಪೂರ್ವ ಕಾರ್ಯವನ್ನು ಮಾಡುವ ಮಹಾಭಾಗ್ಯವನ್ನು ನಮಗೆ ಒದಗಿಸಿದ ಪೂಜ್ಯರ ಚರಣಕಮಲಗಳಿಗೆ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇವೆ.

ಇದನ್ನು ಯಶಸ್ವಿಯಾಗಿ ಪೂರೈಸಲು ಶಕ್ತಿ-ಸಾಮರ್ಥ್ಯ-ಆಶೀರ್ವಾದಗಳನ್ನು ನೀಡಿದ ಶ್ರೀಮಠದ ದಿವ್ಯ ಚೇತನರಾದ ಶಿವಯೋಗಿತ್ರಯರ ಸನ್ನಿಧಿಗೆ ಅನಂತ ಶರಣಾರ್ಥಿಗಳು. ಈ ಮಹತ್ಕಾರ್ಯದಲ್ಲಿ ಸಕ್ರಿಯವಾಗಿ ಕೈಜೋಡಿಸಿದ ಎಲ್ಲ ಗ್ರಂಥಕರ್ತರಿಗೆ, ಗ್ರಂಥ ದಾಸೋಹಿಗಳಿಗೆ, ಛಾಯಾಕ್ಷರ ಸಂಯೋಜಕರಿಗೆ, ಮುಖಪುಟ ವಿನ್ಯಾಸಕಾರರಿಗೆ, ಮುದ್ರಕರಿಗೆ ಹಾಗೂ ಒಟ್ಟಾಗಿ ಸಲಹೆ-ಸಹಾಯ-ಸಹಕಾರ ನೀಡಿದ ಎಲ್ಲ ಸಹೃದಯರಿಗೆ ಅನಂತ ಕೃತಜ್ಞತೆಗಳು.

೨೮-೯-೨೦೧೭ -ವೀರಣ್ಣ ರಾಜೂರ





# ಅರಿಕೆ

ಶ್ರೀ ಮುರುಘರಾಜೇಂದ್ರ ಪ್ರಸಾದನಿಲಯದ ಶತಮಾನೋತ್ಸವದ ಸಂದರ್ಭದಲ್ಲಿ, ಶ್ರೀಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಹಾಕಿಕೊಂಡಿರುವ ಹೊಸ ಯೋಜನೆಗಳಲ್ಲಿ ಶರಣಧರ್ಮ-ಸಾಹಿತ್ಯ-ಸಂಸ್ಕೃತಿ ಕುರಿತ ನೂರೊಂದು ಮೌಲಿಕ ಗ್ರಂಥಗಳ ಪ್ರಕಟಣೆಯೂ ಒಂದಾಗಿರುವುದು ಅತ್ಯಂತ ಅರ್ಥಪೂರ್ಣ ವಾಗಿದೆ. ಶ್ರೀ ಮೃತ್ಯುಂಜಯ ಅಪ್ಪಗಳ ಪ್ರೇರಣೆಯಿಂದ ೧೯೪೭ ರಲ್ಲಿಯೇ ಪ್ರಾರಂಭವಾದ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯ ಉದ್ದೇಶಕ್ಕೆ ಈ ಯೋಜನೆ ಮಕುಟಪ್ರಾಯವಾಗಿದೆಯೆಂದರೆ ತಪ್ಪಾಗದು.

'ವಚನಾಂತರಂಗ' ಪುಸ್ತಕ ಈ ಯೋಜನೆಗೊಳಪಟ್ಟು ಪ್ರಕಟವಾಗುತ್ತಿರುವುದು ಪ್ರಸಾದನಿಲಯದ ವಿದ್ಯಾರ್ಥಿಯಾಗಿದ್ದ ನನ್ನ ಸುಕೃತವೆಂದೇ ನಾನು ಭಾವಿಸಿದ್ದೇನೆ. 'ಮುರುಘಾಮಠದ ಪರಿಸರ-ಪ್ರಭಾವ' ಎಂಬ ಲೇಖನವೂ 'ವಚನಾಂತರಂಗ' ದಲ್ಲಿರುವುದನ್ನು ಓದುಗರು ಗಮನಿಸಬಹುದು. ಬಸವಣ್ಣನವರು ಮತ್ತು ವಚನ ಸಾಹಿತ್ಯಕ್ಕೆ ಸಂಬಂಧಪಟ್ಟ ಇಲ್ಲಿಯ ಲೇಖನಗಳಲ್ಲಿ ಪುನರುಕ್ತಿ ಕಂಡು ಬಂದರೆ, ವಚನಗಳಿಗೆ ಬೇರೆ ಬೇರೆ ಆಯಾಮಗಳಿರುವುದೂ ಒಂದು ಕಾರಣವೆನ್ನಬಹುದು.

ಶ್ರೀ ಮೃತ್ಯುಂಜಯ ಅಪ್ಪಗಳ ಕಾಲದ ಶುದ್ಧ ಸಾಂಸ್ಕೃತಿಕ ವೈಭವವನ್ನು ಮುರುಘಾಮಠಕ್ಕೆ ಪುನಃ ತಂದುಕೊಡಲು, ತಮ್ಮದೇ ಆದ ರೀತಿಯಲ್ಲಿ ಪ್ರಯತ್ನಿಸುತ್ತಿರುವ ಪೂಜ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಿಗೆ ಅನಂತ ಪ್ರಣಾಮಗಳು.

ಪ್ರಧಾನ ಸಂಪಾದಕರಾದ, ಖ್ಯಾತ ವಿದ್ವಾಂಸರೂ ಸಂಶೋಧಕರೂ ಆದ ಡಾ.ವೀರಣ್ಣ ರಾಜೂರ ಅವರಿಗೆ ನಾನು ತುಂಬ ಕೃತಜ್ಞ.

ಧಾರವಾಡ —ಚೆನ್ನವೀರ ಕಣವಿ

ನಾಡಹಬ್ಬ : ೨೦೧೭





## ಪರಿವಿಡಿ

# ೧

❖

# ಬಸವಣ್ಣನವರ ಭಾವಚಿತ್ರ

ಬಸವಣ್ಣನವರನ್ನು ನೆನೆದೊಡನೆಯೆ ನಮ್ಮ ಒಳಗಣ್ಣಿನೆದುರು ಮೂಡುವ ಚಿತ್ರ: ಸದುವಿನಯದಿಂದ ಸದಾಶಿವನ ಒಲುಮೆಗೆ ಪಾತ್ರವಾದ, ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಯನ್ನು ಪಡೆದ, ಸಕಲ ಜೀವಾತ್ಮರಿಗೆ ಲೇಸನೆ ಬಯಸುವ, ಬೆಳಗಿನೊಳಗಣ ಮಹಾ ಬೆಳಗನ್ನು ಕಂಡ ತೇಜಃಪುಂಜವಾದ ಮೂರ್ತಿ. ಬುದ್ಧಿಯ ಅಲಗನ್ನು ಝಳಪಿಸುವ ಚೆನ್ನಬಸವಣ್ಣ, ಕರ್ಮಯೋಗದ ಮರ್ಮವನ್ನರಿತ ಸಿದ್ಧರಾಮ, ಸಾವಿಲ್ಲದ, ಕೇಡಿಲ್ಲದ ರೂಹಿಲ್ಲದ ಚೆಲುವ ಚೆನ್ನಮಲ್ಲಿಕಾರ್ಜುನನಿಗೊಲಿದ ಅಕ್ಕಮಹಾದೇವಿ, ಸ್ವಯಂಲಿಂಗವಾದ ವ್ಯೋಮಮೂರುತಿ ಅಲ್ಲಮಪ್ರಭು– ಇವರ ಮಧ್ಯದಲ್ಲಿ ಇನ್ನೂ ಅನೇಕ ಶಿವಶರಣ ಶರಣೆಯರ ಬಳಸಿನಲ್ಲಿ ಬಸವಣ್ಣ ಅನುಭವಮಂಟಪದ ಅದ್ವಿತೀಯ ವ್ಯಕ್ತಿಯಾಗಿ, ಮಾಣಿಕ್ಯದ ದೀಪ್ತಿಯಂತೆ ಕಂಗೊಳಿಸುತ್ತಾರೆ. ಎಲ್ಲೋ ದೂರದಲ್ಲಿ ದೀನವಾಗಿ ನಿಂತವರನ್ನು ಹತ್ತಿರದಲಿ ಕರೆದು, ಕುಳ್ಳರಿಸಿ, ಮೈದಡವಿ ಮಾತನಾಡಿಸುತ್ತಾರೆ. ಅವರ ಜಾತಿ ಕುಲಗಳನ್ನು ಪರಿಗಣಿಸದೆ 'ಕಾಯಕವೇ ಕೈಲಾಸ'ವೆಂಬ ಮಂತ್ರೋಪದೇಶದಿಂದ ಅವರನ್ನು ಕರ್ತವ್ಯ ಪರಾಯಣರನ್ನಾಗಿ ಮಾಡುತ್ತಾರೆ. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ', 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ' ಎಂದು ಈ ಜಗತ್ತಿನಲ್ಲಿಯ ಬದುಕಿನ ಹೆಚ್ಚಳವನ್ನು ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿ, 'ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ' ಎಂದು ಹುರಿದುಂಬಿಸಿ, 'ದಯವೇ ಧರ್ಮದ ಮೂಲ' ಎಂಬುದನ್ನು ಬಿಂಬಿಸಿ, 'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ'

ಎಂದು ಎಚ್ಚರಿಕೆ ಕೊಟ್ಟು, 'ನಿಮ್ಮ ಶರಣರ ಮನೆಯ ಮಗ ನಾನಯ್ಯಾ" ಎಂಬ ಆತ್ಮೀಯತೆಯಿಂದ, 'ನಂಬಿ ಕರೆದೊಡೆ ಓ ಎನ್ನನೆ ಶಿವನು?' ಎಂದು ಧೈರ್ಯ ನೀಡಿ ಕಳಿಸುತ್ತಾರೆ ಬಸವಣ್ಣನವರು. ಅವರ ಮಾತಿನಲ್ಲಿ ಅದೆಂಥ ಮಾರ್ದವ, ಎಂಥ ಕರುಳಿನ ಕಕ್ಕುಲಾತಿ! ನುಡಿನುಡಿಯಲ್ಲಿ ಒಡಮೂಡಿರುವ ಅಂತಃಕರಣ ಅದೆಷ್ಟು ಪರಿಶುದ್ಧ!

ಬಸವಣ್ಣನವರ ಭಕ್ತಿಭಾಂಡಾರಕ್ಕೆ ಭಾವಶುದ್ಧಿಯೇ ಬಾಗಿಲು. 'ಭಾವಶುದ್ಧಿ ಇಲ್ಲದವಂಗೆ ಭಕ್ತಿ ನೆಲೆಗೊಳ್ಳದು'. ಭಕ್ತಿ, ಮನಸ್ಸನ್ನು ಪರಮಾತ್ಮ ಭಾವದತ್ತ ಹೊರಳಿಸಿ, ಅದನ್ನು ಅಲ್ಲಿಯೇ ನೆಲೆಗೊಳಿಸುವ ಒಂದು ಮಹತ್ತರ ಸಾಧನೆ. ಭಕ್ತ ತನ್ನ ಮನಸ್ಸಿನ ನಿಶ್ಚಲತೆಯನ್ನು ಕಾಯ್ದುಕೊಳ್ಳಬೇಕಾದರೆ ತನ್ನ ಅವಗುಣಗಳೊಡನೆ ನಿರಂತರವೂ ಹೋರಾಡಬೇಕಾಗುತ್ತದೆ. ಈ ಹೋರಾಟದ ಒಳಗುದಿ, ಸುಖ, ಸಂವೇದನೆಗಳು ಅವರ ಭಾವಚಿಂತಾರತ್ನದಂತಿರುವ ವಚನಗಳಲ್ಲಿ ನಿಚ್ಚಳವಾಗಿ ಪಡಿಮೂಡಿವೆ. ಕೊಳದ ನಡುವೆ ಕಮಲ ಕಂಗೊಳಿಸುವಂತೆ ಬಸವಣ್ಣನವರ ಭಾವಶುದ್ಧಿ ನಮ್ಮ ಮನಸ್ಸನ್ನು ಆಕರ್ಷಿಸುತ್ತದೆ. ಹೆಜ್ಜೆ ಹೆಜ್ಜೆಗೆ ಅವರು ತಮ್ಮ ಮನಸ್ಸನ್ನು ಪರೀಕ್ಷಿಸಿಕೊಳ್ಳುತ್ತಲೇ ಇದ್ದರು:

**ಕೆಲಕ್ಕೆ ಶುದ್ಧನಾದೆನಲ್ಲದೆ, ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ?**
**ಕೈಯ ಮುಟ್ಟಿ ಪೂಜಿಸುವರೆ, ಎನ್ನ ಕೈ ಶುದ್ಧವಲ್ಲವಯ್ಯಾ.**
**ಮನಮುಟ್ಟಿ ಪೂಜಿಸುವರೆ, ಎನ್ನ ಮನ ಶುದ್ಧವಲ್ಲವಯ್ಯಾ.**
**ಭಾವ ಶುದ್ಧವಾದೊಡೆ ಕೂಡಲಸಂಗಯ್ಯನು**
**'ಇತ್ತಬಾ' ಎಂದೆತ್ತಿಕೊಳ್ಳನೇಕಯ್ಯಾ ?**

ವೈಯಕ್ತಿಕ ಭಾವಭಾವನೆಗಳಂತೆಯೇ ಸಾಮಾಜಿಕ ದೃಷ್ಟಿಯಿಂದಲೂ ಅವರ ವಚನಗಳಿಗೆ ಹೆಚ್ಚಿನ ಬೆಲೆಯಿದೆ. ಸಮಾಜದಲ್ಲಿ ಕಂಡುಬರುವ ಮೇಲು-ಕೀಳು, ಡಾಂಭಿಕತನ, ನಿಷ್ಕರುಣತೆ ಮೊದಲಾದ ದೋಷಗಳನ್ನೂ, ವ್ಯಕ್ತಿ-ಸಮಾಜಗಳ ರೀತಿ ನಡಾವಳಿಯಲ್ಲಿಯ ಅವಿನಯ, ಅಸಂಬಂಧತೆಗಳನ್ನೂ ಎತ್ತಿ ತೋರಿಸುವಾಗ ಅವರ ಮಾತು ಸಾಕಷ್ಟು ಹರಿತವಾಗಿರುತ್ತದೆ.

**"ಏನಿ ಬಂದಿರಿ ಹದುಳವಿದ್ದಿರೆ?" ಎಂದರೆ**
**ನಿಮ್ಮ ಮೈಸಿರಿ ಹಾರಿ ಹೋಹುದೆ?**
**"ಕುಳ್ಳಿರೆಂ"ದರೆ ನೆಲ ಕುಳಿಹೋಹುದೆ?**
**ಒಡನೆ ನುಡಿದರೆ ಶಿರ-ಹೊಟ್ಟೆಯೊಡೆಯುವುದೆ?**

**ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ,**
**ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವನು?"**

ಇದು ಸಾಮಾಜಿಕ ನೀತಿಯ ಪ್ರಥಮ ಪಾಠವಲ್ಲವೆ? ನಮ್ಮ ನಿತ್ಯದ ವ್ಯವಹಾರದಲ್ಲಿ ಇದನ್ನು ಎಷ್ಟು ಸಲ ನೆನೆದರೂ ಸಾಲದು. ಪ್ರತಿಯೊಂದು ವಿಷಯದಲ್ಲಿಯೂ ಬಸವಣ್ಣನವರ ಮನಸ್ಸು ಎಷ್ಟು ಸೂಕ್ಷ್ಮವಾಗಿ ವರ್ತಿಸುತ್ತಿದೆಯೆಂಬುದನ್ನು ನೋಡಬೇಕು. ಸದಾ ಜಾಗ್ರತವಾದ ಅವರ ಮನಸ್ಸು ತನ್ನ ಕರ್ತವ್ಯದಲ್ಲಿ ಎಂದೂ ಉದಾಸೀನ ತಾಳದು. 'ಅನಂತಕೋಟಿ ಸನ್ಮಾನವ ಮಾಡಿದರೇನು? ನಿಮಿಷದ ಉದಾಸೀನ ಕೆಡಿಸಿತ್ತು!'– ಈ ಎಚ್ಚರಿಕೆಯನ್ನಿಟ್ಟುಕೊಂಡೇ ಆ ಜೀವ ಆದರ್ಶದ ದಾರಿದೀಪವಾಯಿತು. 'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ', ಪ್ರತಿಯೊಬ್ಬರೂ ತಮ್ಮನ್ನು ತಾವು ಸುಧಾರಿಸಿಕೊಂಡರೆ ಕೊನೆಗೆ ಲೋಕವೇ ಸುಧಾರಿಸುತ್ತದೆ. ತಿಳಿಯಾದ ಈ ಸಣ್ಣ ಮಾತಿನಲ್ಲಿ ಎಂಥ ಸಾರ್ವಕಾಲಿಕ ಸತ್ಯ ಹುದುಗಿದೆ! ಕಾಯದಲ್ಲಿರುವ ಅವಗುಣಗಳನ್ನು ಕಳೆದು ಕೃಪೆ ಮಾಡಬೇಕೆಂದು ಕೂಡಲಸಂಗಮನಲ್ಲಿ ಅವರ ನಿತ್ಯ ಪ್ರಾರ್ಥನೆ. ತಮ್ಮ ತಪ್ಪುಗಳನ್ನೆಲ್ಲ ಒಂದೂ ಬಿಡದೆ ಅವರು ನಿವೇದಿಸಿಕೊಳ್ಳುತ್ತಾರೆ. ಮನುಷ್ಯ ಮಾಡಿದ ತಪ್ಪುಗಳನ್ನೆಲ್ಲ ದೇವರು ಎಣಿಸುತ್ತ ಕುಳಿತರೆ ಜಗತ್ತು ಹೇಗೆ ನಡೆದೀತು ? ಎಂತಲೆ 'ಎನ್ನ ತಪ್ಪು ಅನಂತಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ!' ಎಂಬ ಬಿಚ್ಚುನುಡಿ. ಆದರೆ ಇಷ್ಟೇ ಸಾಲದು. 'ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ' ಎಂಬ ದೃಢ ನಿರ್ಧಾರವೂ ಬೇಕು. 'ತುಡುಗುಣಿಯೆಂದೆನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು': ಕೊನೆಯಲ್ಲಿ ಆರೋಪವೆಲ್ಲ ನಾಯಿ ಸಾಕಿದವನ ಮೇಲೆಯೇ ಅಲ್ಲವೆ?

ಇನ್ನೂ ನಾನಾ ಪರಿಯಲ್ಲಿ ಬಸವಣ್ಣನವರು ಈ ಮನಸ್ಸನ್ನು ಶೋಧಿಸಿ ನೋಡಿ ನಿರೂಪಿಸಿದ್ದಾರೆ. ಅವರ ಈ ಮನೋವಿಶ್ಲೇಷಣೆ ಅಚ್ಚರಿಗೊಳಿಸುವಂತಿದೆ. 'ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ, ಎನ್ನ ಮನ' ಎಂಬುದಂತೂ ಅತ್ಯಂತ ಔಚಿತ್ಯಪೂರ್ಣವಾದುದು. ಅದರಲ್ಲಿ ಸೇರಿರುವ ಗುಂಜಿನೆಳೆಗಳನ್ನು ಎಷ್ಟೆಂದು ಆರಿಸಿ ತೆಗೆಯುವುದು!? ಯಾವ ಸ್ಥಾನ ದೊರಕಿದರೂ 'ಅಂದಣವನೇರಿದ ಸೊಣಗನಂತೆ ಕಂಡೊಡೆ ಬಿಡದು ಮುನ್ನಿನ ಸ್ವಭಾವವನ್ನು.' ಬಲು ಬೇಗ ಅದು ವಿಷಯಕ್ಕೆ ಹರಿಯುತ್ತದೆ. 'ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ' ಸಂಸಾರ ವ್ಯಾಮೋಹ. ಈ 'ನಾಯಿತನವ ಮಾಣಿಸು, ನಿಮ್ಮ ಧರ್ಮ' ಎಂದು ಅವರ

ಹೃದಯ ಕೂಡಲ ಸಂಗಮದೇವರಲ್ಲಿ ಮೊರೆಯಿಡುತ್ತದೆ. 'ಕಂಗಳಲೊಬ್ಬನ ಕಾಂಬಳು; ಮನದಲ್ಲೊಬ್ಬನ ನೆನೆವಳು; ಈ ಮಾನಿಸಗಳ್ಳಿಯ ನಂಬದಿರಯ್ಯಾ' ಎಂದು ತಮ್ಮ ಆತ್ಮಕ್ಕೆ ತಾವೇ ಹೇಳಿಕೊಳ್ಳುತ್ತಾರೆ. ಈ ಮನಸ್ಸನ್ನು ಹೇಗೆ ರೂಪಿಸಬೇಕೆಂಬುದನ್ನು ಅವರ ಒಂದು ಬಿನ್ನಹದ ವಚನ ಬಹಳ ಸುಂದರವಾಗಿ ನಿರೂಪಿಸುತ್ತದೆ:

**ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ;**
**ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ;**
**ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ,**
**ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು,**
**ಕೂಡಲ ಸಂಗಮದೇವಾ!**

ಮೊದಲು, ಕರಗಿಸಿ ದೋಷವನ್ನೆಲ್ಲ ಕಳೆದು, ಒರೆಗೆ ಹಚ್ಚಿ, ಮತ್ತೊಮ್ಮೆ ಪುಟಕ್ಕಿಟ್ಟು ಕಡಿದು, ಬಡಿದು, ಕಾಂತಿಗೊಳ್ಳುವಂತೆ ಮಾಡಿ, ಕೊನೆಗೆ ಶರಣರ ಪಾದಕ್ಕೆ ತೊಡಿಗೆಯಾಗಿ ಮಾರ್ಪಡಬೇಕಂತೆ ಈ ಮನಸ್ಸು.

ಅಂತರಂಗದ ಪ್ರಾಮಾಣಿಕತೆಯೇ ಬಸವಣ್ಣನವರ ವಚನಗಳ ಸ್ಥಾಯಿಭಾವವೆನ್ನಬಹುದು 'ಎನ್ನಂತರಂಗವ ನೀವೇ ಬಲ್ಲಿರಿ' ಎಂದು ಸಂಗಮದೇವನಲ್ಲಿ ತಮ್ಮನ್ನು ಒಪ್ಪಿಸಿಕೊಂಡಿದ್ದಾರೆ. ಉಳಿದವರಿಗೆ ಅದರ ತಳಮಳ ತಿಳಿಯದು. ಶರಣರೇನೋ ಅವರನ್ನು ಬಾಯಿತುಂಬ ಹೊಗಳುತ್ತಾರೆ. ಆದರೆ ಸಾಧನೆಯ ದಾರಿಯಲ್ಲಿ ಅವರ ಹೊಗಳಿಕೆಯೇ ಹೊನ್ನಶೂಲವಾಗಿ, ಅವರ ಮನ್ನಣೆಯೇ ಮಸೆದಲಗಾಗಿ ಬಸವಣ್ಣನವರನ್ನು ಗಾಸಿಕೊಳಿಸುತ್ತವೆ. ಅದಕ್ಕೆ ಅವರು ಬೇಡುವುದೇನನ್ನು? 'ನೀನೆನಗೊಳ್ಳಿದನಾದರೆ ಎನ್ನ ಹೊಗಳ್ತೆಗೆ ಅಡ್ಡಬಾರಾ ಧರ್ಮಿ' ಎಂದು ಅವರ ಒಳದನಿ ಮಿಡಿಯುತ್ತದೆ. ಹೊಗಳಿಕೆ, ಮನ್ನಣೆಗಳು ಅನೇಕ ಸಲ ಪ್ರಗತಿಗೆ ಮಾರಕವಾಗಿ ಪರಿಣಮಿಸುವುದುಂಟು. ಆದರ್ಶವಾದಿಗಳು ಈ ಮಾತನ್ನು ಮನವರಿಕೆ ಮಾಡಿಕೊಂಡಷ್ಟೂ ಒಳ್ಳೆಯದಲ್ಲವೆ?

ಮನುಷ್ಯನಾಗಿ ಹುಟ್ಟಿದ ಮೇಲೆ ಮಹತ್ತನ್ನು ಅರಿಯದೆ, ಸಾಧಿಸದೆ ಹೋದರೆ ಪ್ರಯೋಜನವೇನು? ಹಾಗೆ ನೋಡಿದರೆ ತರುಮರಗಳೇ ಲೋಕೋಪಕಾರಿ. 'ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ' ನುಂಗಿದಾಗ ಬಸವಣ್ಣನವರ ಜೀವ 'ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ' ಎಂದು ಪರಿತಪಿಸಿದರೂ 'ಅಕಟಕಟಾ! ಸಂಸಾರವು ವೃಥಾ ಹೋಯಿತ್ತಲ್ಲಾ' ಎಂಬ

ಸಂಕಟದ ಸೊಲ್ಲಿನಲ್ಲಿ ಸಂಸಾರವನ್ನು ಸಾರ್ಥಕಗೊಳಿಸಬೇಕೆಂಬ ಧ್ವನಿ ಅಡಗಿದೆ. ಅಜ್ಞಾನವಿಲ್ಲದೆ ಜೀವನ ಮಾಡುವುದೆಂದರೆ ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆಯೇ ಸರಿ. ಮಾಯೆ ಮುಂದುಗೆಡಿಸಿ ಅಳಲಿಸಿ ಬಳಲಿಸಿ ಕಾಡುತ್ತಿರುವಾಗ ಕೂಡಲಸಂಗನ ಕೂಡುವ ಬಗೆ ಹೇಗೆ? 'ಇಂದಿಗೆಂತು, ನಾಳೆಗೆಂತು ಎಂದು ಬೆಂದೊಡಲ ಹೊರೆ' ಯುವುದರಲ್ಲಿಯೇ ವೇಳೆ ಹೋಗುತ್ತಿದೆ. ಹೊನ್ನ, ಹೆಣ್ಣ, ಮಣ್ಣ ತೋರಿ ಈ ಮಾಯೆ ಟೀವಕ ಟಿಂಬಕವನಾಡಿಸುತ್ತದೆ ಜೀವಿಗಳನ್ನು. ಆದರೆ ಕಾಯದ ಕರ್ಮದ ಫಲಭೋಗ 'ಆಸತ್ತೆ, ಬೇಸತ್ತೆ, ಬಳಲಿದೆ, ಏನು ಮಾಡಲಿ' ಎಂದರೆ ಬಿಡಲಾರದು. ಕೂಡಲಸಂಗನ ಶರಣರು ಬಂದು 'ಹೋ, ಹೋ, ಅಂಜದಿರು' ಎಂದು ಧೈರ್ಯವಿತ್ತರೆ ಸಾಕು ಬದುಕುವುದು ಸಾಧ್ಯ.

ಸಂಸಾರದ ದಂದುಗ ಹಿಂಗಿ ಮನದಲ್ಲಿ ಪರಿಣಾಮವಾಗಿ ಪರಮ ಸಂತೋಷದಲ್ಲಿರಬೇಕೆಂದು ಮನ ಬಯಸಿದರೂ, ಬರಿಯ ಭಕ್ತಿಯುಳ್ಳವರ ನೋಡಿನೋಡಿ ಬಯಸಿದರೇನು ಬಂತು? ಆದರೆ, "ವಿಷಯವೆಂಬ ಹಸುರನ್ನು ಮುಂದೆ ತಂದು ಪಸರಿಸಿದರೆ ಪಶುವೇನ ಬಲ್ಲುದು, ಹಸುರೆಂದೆಳಸುವದು". ಆದ್ದರಿಂದ "ವಿಷಯರಹಿತನ ಮಾಡಿ, ಭಕ್ತಿರಸವ ತಣಿಯೆ ಮೇಯಿಸಿ, ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲುಹು" ಎಂದು ಬೇಡುತ್ತದೆ ಬಸವಣ್ಣನವರ ಮುಗ್ಧ ಮನಸ್ಸು. ಅಜ್ಞಾನ ಎಲ್ಲರಿಗೂ ಮುಸುಕು ಹಾಕುತ್ತದೆ, ನಿಜ. ಅದನ್ನು ಅರಿತು ನಡೆಯಬೇಕಾದುದು ಶರಣಮಾರ್ಗ. ಮನಸ್ಸನ್ನು ಬೆಳಗಿ ಕನ್ನಡಿಯಂತೆ ಇಟ್ಟುಕೊಂಡಾಗ ಮಾತ್ರ ಅದರಲ್ಲಿ ಬಿಂಬ ನಿಚ್ಚಳವಾಗಿ ಮೂಡೀತು. ಸಾಮಾನ್ಯ ಮಾನವನಿಗೂ ಶರಣನಿಗೂ ಇರುವ ಅಂತರವೆ ಇದು:

**ಉಂಬ ಬಟ್ಟಲು ಬೇರೆ ಕಂಚಲ್ಲ:**
**ನೋಡುವ ದರ್ಪಣ ಬೇರೆ ಕಂಚಲ್ಲ**
**ಭಾಂಡ ಒಂದೆ, ಭಾಜನ ಒಂದೆ; ಬೆಳಗೆ ಕನ್ನಡಿಯೆನಿಸಿತ್ತಯ್ಯಾ.**

ಆದ್ದರಿಂದ ಮಾನವ-ಶರಣರಲ್ಲಿಯ ಭೇದವನ್ನು ಬಸವಣ್ಣನವರು ಒಂದು ಕಿರುನುಡಿಯಲ್ಲಿ ಹಿರಿದಾಗಿ ಹೇಳಿದ್ದಾರೆ: "ಅರಿದರೆ ಶರಣ; ಮರೆದರೆ ಮಾನವ." ಮರೆಯುತ್ತ ಅಜ್ಞಾನದ ಕತ್ತಲೆಯಲ್ಲಿ ಕೊಳೆಯುವುದು ಮಾನವ ಸ್ವಭಾವವಾದರೆ, ಅರಿಯುತ್ತ ಮನಸ್ಸನ್ನು ಬೆಳಕಿಗೆ ತೆರೆಯುತ್ತ ಸಾಗುವುದು ಶರಣನ ದಾರಿ.

ತಾವು ಸಣ್ಣವರೆಂಬ ನಮ್ರಭಾವದ ಬಸವಣ್ಣನವರು ಜಗತ್ತಿಗೆ ದೊಡ್ಡವರಾದರು. "ಎನ್ನಿಂದ ಕಿರಿಯರಿಲ್ಲ; ಶಿವಭಕ್ತರಿಂದ ಹಿರಿಯರಿಲ್ಲ" ಎಂಬ ನಡೆ-ನುಡಿ ಅವರ

ಉಸಿರಾಗಿದ್ದಿತು. ಯಾವ ಪದವಿಯನ್ನೂ, ಅಧಿಕಾರವನ್ನೂ ಅವರು ಬಯಸಿದವರಲ್ಲ. 'ನಿಮ್ಮ ಸದ್ಭಕ್ತರನರಿದಿಪ್ಪ ಮಹಾ ಪದವಿಯನೆ ಕರುಣಿಸಯ್ಯ' ಎಂದು ಅವರು ಕೋರಿದ್ದಾರೆ. ತಮ್ಮವರು ಇರಿಸಿಕೊಂಡು, ತರಿಸಿಕೊಂಡು, ಕೊರೆಯಿಸಿಕೊಂಡು, ಜರೆಯಿಸಿಕೊಂಡು ಭಕ್ತರಾಗಿರುವದು ಅವರಿಗೆ ಚೆನ್ನಾಗಿ ಗೊತ್ತು. ಅದೇನು ಸುಮ್ಮನೆ ಆಗುತ್ತದೆಯೆ? 'ಆನು ಭಕ್ತನೆಂಬ ಹುಸಿಯ ಮಸಕವನೇನ ಬಣ್ಣಿಸುವೆನಯ್ಯ' ಎಂದು ಅವರೇ ನುಡಿದಿದ್ದಾರೆ. ಸಮಾಜದಲ್ಲಿ ಎಲ್ಲರೊಡನೆ ಕೂಡಿಕೊಂಡು ಸಮತಾಭಾವದಿಂದ ನಡೆಯುವಾಗ 'ಉತ್ತಮ ಕುಲ' ಎಂಬುದು 'ಕಷ್ಟತನದ ಹೊರೆಯಾಗಿ' ಅವರಿಗೆ ಪರಿಣಮಿಸಿತು. ಕಕ್ಕಯ್ಯ ಒಕ್ಕುದನಿಕ್ಕ, ದಾಸಯ್ಯ ಶಿವದಾನವನೆರೆಯ! ಮನ್ನಣೆಯ ಚೆನ್ನಯ್ಯ ಅವರನ್ನು ಮನ್ನಿಸ ಎಂದ ಮೇಲೆ ಅವರ ಮನಸ್ಸು ನೊಂದುಕೊಳ್ಳದಿರುತ್ತದೆಯೇ? ಅದಕ್ಕಾಗಿ ಅವರ ಆತ್ಮ ಕೂಡಲಸಂಗನ ಅಡಿಯಲ್ಲಿ ಮಿಡಿಯುತ್ತದೆ; ಅಪೂರ್ವವಾದ ಆತ್ಮೀಯತೆಯಿಂದ:

"ಅಪ್ಪನು ನಮ್ಮ ಮಾದರ ಚೆನ್ನಯ್ಯ;
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ;
ಚಿಕ್ಕಯ್ಯನೆಮ್ಮಯ್ಯ, ಕಾಣಯ್ಯ;
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ;
ಎನ್ನನೇತಕ್ಕರಿಯಿರಿ, ಕೂಡಲಸಂಗಯ್ಯಾ."

ಕೀಳು ಕುಲದವರೆನಿಸಿಕೊಂಡ ಇವರನ್ನು ಬಸವಣ್ಣನವರು ಎದೆಗಪ್ಪಿ ಕೊಂಡಿರುವ ರೀತಿ ಉಚ್ಚಕೋಟಿಗೆ ಸೇರಿದ್ದಲ್ಲವೆ? ಶರಣರೆಲ್ಲರೂ ಅವರ ಶುದ್ಧ ಸಾತ್ವಿಕ ನೋಟಕ್ಕೆ 'ರತ್ನ ಮೌಕ್ತಿಕದಚ್ಚು'.

ಶರಣರ ಸಂಗದಲ್ಲಿ ದೊರೆಯುವ ಅನುಭಾವದ ಸುಖ ಬೇರೆ ಎಲ್ಲಿ ದೊರೆಯಲು ಸಾಧ್ಯ? ಆದುದರಿಂದ ಶರಣರ ಬರವು ಅವರಿಗೆ ಪ್ರಾಣ ಜೀವಾಳ. ಅವರಿಗಾಗಿ 'ತನು ಮೀಸಲು, ಮನ ಮೀಸಲು, ನಯನ ಮೀಸಲು'. ಅವರನ್ನಗಲುವ ಧಾವತಿಯಿಂದ ಮರಣವೇ ಲೇಸೆನಿಸುತ್ತದೆ, ಆ ಮಹಾ ಜೀವಕ್ಕೆ.

"ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು
ಬತ್ತಿಯನಿಕ್ಕಿ ಬರವ ಹಾರುತ್ತಿದ್ದೆನೆಲಗವ್ವಾ,
ತರಗೆಲೆ ಗಿರುಕೆಂದೊಡೆ ಹೊರಗನಾಲಿಸುವೆ;
ಅಗಲಿದೆನೆಂದೆನ್ನ ಮನ ದಿಗಿಲೆಂದಿತ್ತೆಲಗವ್ವಾ!
ಕೂಡಲ ಸಂಗನ ಶರಣರು ಬಂದು, ಬಾಗಿಲ ಮುಂದೆ ನಿಂದು
ಶಿವಾ ಎಂದರೆ ಸಂತೋಷಬಟ್ಟೆನೆಲಗವ್ವಾ!"

ಏನು ಅಂತಃಕರಣ! ಏನು ಸಂತೋಷ ! ಶರಣರು ಬಂದುಬಿಟ್ಟರೆ 'ಸಾಸವೆಯ ಮೇಲೆ ಸಾಗರವರಿ'ದಂತಾಗುತ್ತದೆ ಅವರ ಹರುಷಕ್ಕೆ! 'ಶರಣರ ಸಂಗದಲ್ಲಿದ್ದು ಶಿವನ ಬೇಡುವ ಹಂಗೇಕಯ್ಯ' ಎನ್ನುತ್ತದೆ ಅವರ ಒಳದನಿ. ಯಾಕೆಂದರೆ, ಶಿವನಿಗಿಂತಲೂ ಶಿವಭಕ್ತನಧಿಕ.

ಇಷ್ಟರಿಂದಲೇ ಬಸವಣ್ಣನವರ ವ್ಯಕ್ತಿತ್ವದ ಸಂಪೂರ್ಣ ದರ್ಶನವಾದಂತಾಗದು; ಅವರ ಧೀರತ್ವವನ್ನೂ ಒಂದಿಷ್ಟು ನೋಡಬೇಕು. 'ನಮ್ಮ ಕೂಡಲ ಸಂಗನ ಶರಣರು ಧೀರರು' ಎಂದು ಮೊದಲೇ ಉಗ್ಘಡಿಸಿದ್ದಾರೆ.

ಅವರ ನಿಷ್ಠೆಯೇ ಈ ಕೆಚ್ಚಿಗೂ ಕಾರಣವೆನಿಸುತ್ತದೆ. 'ಸ್ವರ್ಗ, ಮರ್ತ್ಯ, ಪಾತಾಳದೊಳಗೆಲ್ಲ ಒಬ್ಬನೇ ದೇವ" ಎಂದು ದಿಟ್ಟತನದಿಂದ ಸಾರುತ್ತಾರೆ. ಅರಗು ತಿಂದು ಕರಗುವ ದೈವ, ಉರಿಯ ಕಂಡರೆ ಮರುಟುವ ದೈವ, ಅವಸರ ಬಂದರೆ ಮರುವ ದೈವ, ಅಂಜಿಕೆಯಾದರೆ ಹೂಳುವ ದೈವ ಹೀಗೆ 'ದೈವ ದೈವವೆಂದು ಕಾಲಿಡಲಿಂಬಿಲ್ಲ'ದ ಪರಿಸ್ಥಿತಿಯನ್ನು ಎಷ್ಟೊಂದು ವಾಸ್ತವವಾಗಿ ಚಿತ್ತಿಸಿದ್ದಾರೆ! "ಎಲ್ಲಾ ಪುರಾಣಗಳು ಕರ್ಮಕ್ಕೆ ಮೊದಲು' ಎಂಬುದನ್ನೂ ಎತ್ತಿ ತೋರಿಸಿದ್ದಾರೆ.

ನಿಜವಾದ ಶರಣನಿಗೆ ಏತರ ಅಂಜಿಕೆ? "ನ್ಯಾಯ ನಿಷ್ಠುರಿ; ದಾಕ್ಷಿಣ್ಯಪರ ನಾನಲ್ಲ. ಲೋಕವಿರೋಧಿ ಶರಣನಾರಿಗೂ ಅಂಜುವವನಲ್ಲ; ಕೂಡಲ ಸಂಗಮ ದೇವರ ರಾಜತೇಜದಲ್ಲಿಪ್ಪನಾಗಿ". ಬರುವುದನ್ನೆಲ್ಲ ಎದುರಿಸುವ ಕೆಚ್ಚು ಕಡಮೆಯೇ? "ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ". ಲಾಂಛನವ ಕಂಡು ನಂಬಿ ಅವರಂತರಂಗದ ವಿಚಾರವನ್ನು ಕೂಡಲ ಸಂಗಮದೇವನಿಗೆ ಬಿಟ್ಟುಗೊಟ್ಟ ಬಸವಣ್ಣನವರು 'ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವ, ನೀ ಸಾಕ್ಷಿಯಾಗಿ 'ಚಿಃ ಎಂಬೆ' ಎಂಬುದನ್ನೂ ನಾವು ನೆನೆಯಬೇಕು.

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ, ಮನದಲ್ಲಿ ನೆನಹು ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ ಕೂಡಲ ಸಂಗಮದೇವರ ಚರಣ ಕಮಲದಲ್ಲಿ ತುಂಬಿಯಾಗಿ ತುಂಬಿರುವ ಬಸವಣ್ಣನವರ ಆ ಸರ್ವಸಮರ್ಪಣ ಭಾವವನ್ನು ನೋಡಿ;

**"ಎನ್ನ ಕಾಯವ ದಂಡಿಗೆಯ ಮಾಡಯ್ಯಾ;**
**ಎನ್ನ ಶಿರವ ಸೋರೆಯ ಮಾಡಯ್ಯಾ;**
**ಎನ್ನ ನರವ ತಂತಿಯ ಮಾಡಯ್ಯಾ;**

**ಎನ್ನ ಬೆರಳ ಕಡ್ಡಿಯ ಮಾಡಯ್ಯಾ !**
**ಬತ್ತೀಸ ರಾಗವ ಹಾಡಯ್ಯಾ; ಉರದಲೊತ್ತಿ ಬಾರಿಸು,**
**ಕೂಡಲ ಸಂಗಮದೇವಾ."**

ಆ ದಿವ್ಯ ನಾದತರಂಗ ನಮ್ಮ ನರನರವನ್ನೂ ಸೇರಿ, ಹೃದಯದಲ್ಲಿ ತುಂಬಿ ವಿಶ್ವವ್ಯಾಪಿಯಾಗುತ್ತಿದೆ. ಸಮಾಜದ ಸರ್ವಾಂಗದಲ್ಲೂ ನವಚೈತನ್ಯವನ್ನು ತುಂಬಿ ಇಂದಿನ ಜೀವನಕ್ಕೆ ಹೊಸ ದೃಷ್ಟಿಯನ್ನೂ, ಹೊಸ ದಾರಿಯನ್ನೂ ತೋರಿಸಿಕೊಡುತ್ತಿದೆ. ವ್ಯಕ್ತಿ, ಸಮಾಜ, ವಿಶ್ವ ಹಾಗೂ ಅಧ್ಯಾತ್ಮ ಇವುಗಳನ್ನು ಸರಿಯಾದ ರೀತಿಯಲ್ಲಿ ಗುರುತಿಸಿ ಸಮನ್ವಯಗೊಳಿಸಿದ ಅನುಭವ ಮಂಟಪದ ಅರಿವಿನ ಅರವಟ್ಟಿಗೆ ಬಸವಣ್ಣನವರ ವಚನಗಳು.

*(ಸಾಹಿತ್ಯ ಚಿಂತನ: ೧೯೬೬)*



೨

❖

# ಅಚ್ಚ ಬದುಕಿನ 'ರತ್ನ ಮೌಕ್ತಿಕದಚ್ಚು'

ಭಾವಶುದ್ಧಿಯ ಬೆಳಗಿನಲ್ಲಿ ಅಂತರಂಗದ ರತ್ನವನ್ನು ಶೋಧಿಸಿದ ಬಸವಣ್ಣನವರು ಮಾವನ ಜೀವನದ ಮೌಲ್ಯಗಳಿಗೆ ಹೊಸ ಜೀವಕಳೆಯನ್ನು ತಂದುಕೊಟ್ಟ ಧೀಮಂತರು. ನಿತ್ಯದ ಬದುಕಿನ ಸತ್ಯ ಸ್ವರೂಪದ ಅರಿವಿನಿಂದ, ಸಾಮಾಜಿಕ ರೀತಿನೀತಿಗಳ ಪರಿಶೋಧನೆಯಿಂದ, ವ್ಯಕ್ತಿ ವ್ಯಕ್ತಿಗಳ ನಡುವಿನ ಪರಸ್ಪರ ಸಂಬಂಧಗಳ ಗೌರವ ಭಾವನೆಯಿಂದ, ಆತ್ಮವಿಮರ್ಶೆಯ ಅಲೌಕಿಕ ಅನುಭಾವದಿಂದ, ಮರ್ತ್ಯಕ್ಕೆ ಮಹವನ್ನು ತಂದ ಮಹಾನುಭಾವರಾಗಿ ಅವರು ಕಂಗೊಳಿಸಿದ್ದಾರೆ. ಮಾತು ಮತ್ತು ಕೃತಿಯ ನಡುವಿನ ಕಂದರವನ್ನು ಸಹಜವಾಗಿ ಹೋಗಲಾಡಿಸಿದ ಅವರ ಬದುಕಿನ ಬಗೆಯೇ ಅಸಂಖ್ಯ ಜನತೆಯ ವ್ಯಕ್ತಿತ್ವವನ್ನು ರೂಪುಗೊಳಿಸಿದ 'ರತ್ನ ಮೌಕ್ತಿಕದಚ್ಚಾ'ಗಿ ಪರಿಣಮಿಸಿತು. ಸ್ಫಟಿಕದ ಸಲಾಕೆಯಂತೆ ಪಾರದರ್ಶಕವಾಗಿರುವ ಅವರ ನಡೆ-ನುಡಿಗಳಲ್ಲಿ, ಕೊಡುಕೊಳ್ಳುಗಳಲ್ಲಿ, ನಿಯಮ-ನಿಷ್ಠೆಗಳಲ್ಲಿ, ಒಲವು-ನಿಲುವಿನಲ್ಲಿ ಅವರ ಅಂತರಂಗದ ಮಾಣಿಕ್ಯ ದೀಪ್ತಿಯ ಚೆಂಬೆಳಕು ಸೂಸುವರಿದಿದೆ. ದಿಟ-ಪುಟ-ಭಕ್ತಿ ಸಂಪುಟದಲ್ಲಿ ಮೂಡಿ ಮಿನುಗುತ್ತಿರುವ ವಚನಗಳು ಅವರ ಜೀವನದ ಕಾವ್ಯವನ್ನು ಕಂಡರಿಸಿದೆ. ಪರಮ ಸತ್ಯದ ಕುರುಹಾದ ಲಿಂಗದಲ್ಲಿ ಪಡೆದ ಸಮರತಿ, ಸಮಕಳೆ, ಸಮಸುಖ, ಸ್ವಾನುಭಾವದ ಹಿರಿಮೆಯನ್ನು ಜೀವನ ರಂಗದಲ್ಲಿಯೂ ಅವರು ಸಾಧಿಸಿ ತೋರಿಸಿದರು. ವ್ಯಕ್ತಿಯ ನಡವಳಿಕೆಯಲ್ಲಿ ಭಾವಶುದ್ಧಿಗೆ ಪ್ರಥಮ ಪ್ರಾಶಸ್ತ್ಯ ಒದಗಿಸಿದರು. ಅದಿಲ್ಲದೆ ನೂರನೋದಿ ನೂರ ಕೇಳಿದರೇನು ? 'ಭಾವಶುದ್ಧವಾದೊಡೆ ಕೂಡಲಸಂಗಯ್ಯನು 'ಇತ್ತ ಬಾ' ಎಂದೆತ್ತಿಕೊಳ್ಳನೇಕಯ್ಯ?' ಎಂಬುದು ಅವರ ನಿಶ್ಚಯವಾದ ನಿಲವು.

ಬಸವಣ್ಣನವರೂ ಎಲ್ಲರಂತೆಯೇ ಸಂಸಾರದ ಜಂಜಾಟಕ್ಕೆ ಒಳಗಾದವರು. 'ಸಂಸಾರ ಸಾಗರದ ತೆರೆ ಕೊಬ್ಬಿ ಮುಖದ ಮೇಲೆ ಅಲೆಯುತ್ತಿದ್ದುದೇ ನೋಡಾ!' ಎಂದು ಅದರ ಆಟಾಟೋಪವನ್ನು ಅನುಭವಿಸಿದವರು. 'ಸಂಸಾರ ಸಾಗರ ಸಿರದುದ್ದವಾದ ಬಳಿಕ ಏನ ಹೇಳುವೆನಯ್ಯ' ಎಂಬ ಅಸಾಹಯ ಸ್ಥಿತಿಯಲ್ಲಿ ಬೆಂದವರು. 'ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿ'ದಾಗಲೂ ಅವರು ಅದರೊಡನೆ ಹೋರಾಡಿ ಸತ್ಯಸಂಕಲ್ಪದಿಂದ ಬಿಡುಗಡೆ ಪಡೆದು 'ನಾನಾವರ್ಣದ ಸಂಸಾರ ಹಾವು-ಹಾವಾಡಿಗನ ಸ್ನೇಹದಂತೆ' ಎಂಬುದನ್ನು ಕಂಡುಕೊಂಡು ಹೊಂದಾಣಿಕೆಯನ್ನು ಸಾಧಿಸಿ ಅದರ ವಿಷದ ಹಲ್ಲುಗಳನ್ನು ಮುರಿದು ಅದರೊಡನೆ ಅನುನಯದಿಂದ ಆಟವಾಡಿದ್ದಾರೆ. ಜೀವನದ ವಾಸ್ತವತೆಯನ್ನು ಅಲ್ಲಗಳೆದು ಅದಕ್ಕೆ ಬೆನ್ನು ತೋರಿಸಿ ಪಾರಾಗುವ ಕೃತ್ರಿಮ ಉಪಾಯಗಳಿಗೆ ಅವರು ಒಳಗಾಗಲಿಲ್ಲ. 'ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು; ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು' ಎಂಬ ವಾಸ್ತವತೆಯನ್ನು ಅರಗಿಸಿಕೊಂಡೇ ಅವರು ಮುಂದುವರಿದರು. ಹಾಗೆಯೇ 'ನಿಮ್ಮ ಮುಟ್ಟಿ ಪರಧನ  ಪರಸ್ತ್ರೀಯರಿಗೆಳಸಿದರೆ ನಿಮ್ಮ ಚರಣಕ್ಕೆ ದೂರ' ಎಂಬ ಅವಶ್ಯವಾದ ನೈತಿಕ ಮೌಲ್ಯವನ್ನೂ ಅವರು ಸಾರದೇ ಇಲ್ಲ. ಇಂದಿಗೆಂತು ನಾಳೆಗೆಂತು ಎಂದು ಬೆಂದೊಡಲ ಹೊರೆಯ ಹೋಗುತ್ತಿರುವ ಸಾಮಾನ್ಯ ಸ್ಥಿತಿಯಿಂದ ಅದನ್ನು ಮೇಲಕ್ಕೆತ್ತಿ, 'ಹೊತ್ತು ಹೋದ ಬಳಿಕ ನಿನ್ನನ್ನಾರು ಬಲ್ಲರು? ಹೊತ್ತು ಹೋಗದ ಮುನ್ನ ಮೃತ್ಯು ಒಯ್ಯದ ಮುನ್ನ ತೊತ್ತುಗೆಲಸವ ಮಾಡು ನಮ್ಮ ಕೂಡಲಸಂಗಮದೇವನ' ಎಂಬ ಅರಿವನ್ನು ಜೀವಕ್ಕುಂಟು ಮಾಡಿ ಸಂಸಾರದಲ್ಲಿ ಸದ್ಗತಿಯನ್ನು ಪಡೆಯುವ ದಾರಿಯನ್ನು ತೋರಿದ್ದಾರೆ. ಮರೆದ ಮಾನವನಿಂದ ಅರಿದ ಶರಣ ಸ್ಥಿತಿಯವರೆಗಿನ ಅವರ ಅಂತರಂಗದ ಹೋರಾಟವೇ ನಮಗೊಂದು ಅಮೌಲ್ಯ ಸೊತ್ತಾಗಿದೆ. ಅಂತರಂಗ ಬಹಿರಂಗ ಜೀವನವೆರಡರಲ್ಲೂ ಅವರು ಕ್ರಾಂತಿಕಾರಿಗಳೇ. ಜಾತಿ-ಮತಗಳ ಮೇಲು-ಕೀಳುಗಳ ಎಲ್ಲ ಬಹಿರಾಡಂಬರವನ್ನೂ ತೆಗೆದೊಗೆದು 'ಎನ್ನ ಬಚ್ಚಬರಿಯ ಬಸವನೆನಿಸಯ್ಯ' ಎಂಬ ಹಂಬಲವನ್ನು ತಾಳಿ, ಒರೆಗೆ, ಬಣ್ಣಕ್ಕೆ ಬಂದು ಎಲ್ಲರಿಗೂ ಆರಾಧ್ಯರೆನಿಸಿದರು. ಜೀವನದ ಅನೇಕ ದ್ವಂದ್ವಗಳನ್ನು ಎದುರಿಸಿ ಗೆದ್ದು, 'ಕೊಲುವೆನೆಂಬ ಭಾಷೆ ದೇವನದು ಗೆಲುವೆನೆಂಬ ಭಾಷೆ ಭಕ್ತನದು' ಎಂದು ಸಾರಿ ವಾಸ್ತವತೆಯನ್ನೂ ಆದರ್ಶವನ್ನೂ ಬೆಸೆದು ತೋರಿಸಿದರೆಂದೇ ಬಸವಣ್ಣನವರು ತೀರ ಸಾಮಾನ್ಯ ಮನುಷ್ಯನಿಗೂ ಆತ್ಮೀಯರಾಗಿದ್ದಾರೆ.

'ಆಚಾರವೆಂಬುದು ಹಾವಸೆಗಲ್ಲು' ಎಂಬ ಪರಿಜ್ಞಾನ ಬಸವಣ್ಣನವರಿಗೆ ಸಾಕಷ್ಟಿದ್ದಿತು. ಅದನ್ನು ಜಾರುತ್ತಲೇ ಏರಬೇಕಾದುದೇ ಪ್ರತಿಯೊಬ್ಬನೂ ಎದುರಿಸಬೇಕಾದ

ಸಮಸ್ಯೆ 'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪನಂತೆ' ಘೋರವಾಗುವುದೆಂಬ ಎಚ್ಚರವೇ ಅವರ ದಿವ್ಯ ಸಾಧನೆಯ ಮರ್ಮವಾಗಿದೆ. ಎಷ್ಟು ಬಗೆಯಲ್ಲಿ ಅವರು ತಮ್ಮ ಮನಸ್ಸನ್ನು ಅಗಿದು ಬಗಿದು ನೋಡಿದರು, ಎಷ್ಟೊಂದು ಪ್ರಾಮಾಣಿಕವಾಗಿ ಅದನ್ನು ನಿರೂಪಿಸಿದರು ಎಂಬುದನ್ನು ಮನಗಂಡರೆ ಆ ವಿಷಯ ವೈಯಕ್ತಿಕವಾಗಿರುವಷ್ಟೇ ಪ್ರಾತಿನಿಧಿಕವೂ ಆಗಿ ಮಾನವ ಜನಾಂಗದ ಅಂತರ್ಯವನ್ನೇ ಬಿಚ್ಚಿ ಬಯಲಿಗಿಟ್ಟಂತಾಗುತ್ತದೆ. 'ಎನಗೊಂದು ನಿಜವಿಲ್ಲ; ಎನಗೊಂದು ನಿಷ್ಪತ್ತಿಯಿಲ್ಲ! ಲಿಂಗವ ತೋರಿ ಉದರವ ಹೊರೆವ ಭಂಗಗಾರ ನಾನು' ಎಂದೂ ಆ ಮನಸ್ಸು ತಳಮಳಗೊಳ್ಳುತ್ತದೆ. 'ಧೃತಿಗೆಟ್ಟು ಅನ್ಯರ ಬೇಡದಂತೆ, ಮತಿಗೆಟ್ಟು ಪರರ ಹೊಗಳದಂತೆ ಎನ್ನ ಪ್ರತಿಪದಿಸು' ಎಂಬ ಅವರ ಪ್ರಾರ್ಥನೆ ಅವರ ವ್ಯಕ್ತಿತ್ವದ ವೈಶಿಷ್ಟ್ಯದೊಂದಿಗೆ ವ್ಯಕ್ತಿಜೀವನದ ಮೌಲ್ಯಗಳನ್ನೇ ಎತ್ತಿ ಹಿಡಿಯುತ್ತದೆ. 'ಆಡಿ ಅಳುಪದಿರಾ ಲೇಸ ಮಾಡಿ ಮರುಗದಿರಾ ಎಲೆ ಮನವೇ' ಎಂಬ ಮಾತು ಮೃದುವಾಗಿರುವಷ್ಟೇ ಮಾನವತೆಯ ಕಳಕಳಿಯನ್ನು ವ್ಯಕ್ತಪಡಿಸುತ್ತದೆ. ಜೀವನದ ಸಂಕಷ್ಟಗಳನ್ನು, ವಿರೋಧಗಳನ್ನು ನಿರ್ವಂಚನೆಯಿಂದ ಎದುರಿಸಿ ಗೆಲ್ಲುವ ಧೀರತೆ ಅವರದು. ಅದಕ್ಕಾಗಿ 'ಕಾದಿಗೆಲಿಸಯ್ಯ, ಎನ್ನ ತನುಮನ ಧನದಲ್ಲಿ ವಂಚನೆಯಿಲ್ಲದೆ' ಎಂಬುದು ಅವರ ಬಿನ್ನಪ.

ನಿಜವಾಗಿ ಬೆಳೆಯಬೇಕೆನ್ನುವ ಜೀವಕ್ಕೆ ಹೊಗಳಿಕೆ, ಮನ್ನಣೆ ಮೊದಲಾದವು ಆತಂಕವನ್ನೊಡ್ಡಬಹುದು. 'ಎನ್ನ ಹೊಗಳ್ತೆಯೇ ಎನ್ನ ಮೈಗೊಂಡಿತಲ್ಲಾ' ಎಂದು ಪರಿತಪಿಸುವ ಈ ನಿರ್ಮಲ ಹೃದಯಕ್ಕೆ ಹೊಗಳಿಕೆ ಹೊನ್ನಶೂಲವಾಗಿ, ಮನ್ನಣೆ ಮಸೆದಲಗಾಗಿ ಪರಿಣಮಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಕಂಡ ಕಂಡವರೆಲ್ಲಾ ಕಾಲು ಬೀಳತೊಡಗುತ್ತಲೇ ವ್ಯಕ್ತಿಯ ಅಹಂಕಾರ ಹೆಚ್ಚುತ್ತದೆ. ಬಸವಣ್ಣನವರಿಗೆ ಇಂಥದು ಎಳ್ಳಷ್ಟೂ ಸೇರದು. ಹಾಗೆ ಬೆಳೆಯುವ ಹಮ್ಮು-ಬಿಮ್ಮಿನ ಕೆಚ್ಚನ್ನು ಸುಟ್ಟು ಬೂದಿ ಮಾಡಿದಾಗಲೇ ಅವರಿಗೆ ಸಮಾಧಾನ.

**'ಅವರಿವರೆನ್ನದೆ ಚರಣಕ್ಕೆರಗಲು ಅಯ್ಯತನವೇರಿ**
**ಬೆಬ್ಬನೆ ಬೆರೆವೆ ನಾನು: ಕೆಚ್ಚು ಬೆಳೆಯಿತ್ತಯ್ಯಾ !**
**ಆ ಕೆಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ**
**ಬೆಳುಗಾರದಂತೆ ಮಾಡು ಕೂಡಲ ಸಂಗಮದೇವಾ.'**

ಕಾವಿಯನ್ನುಟ್ಟವರೆಲ್ಲ ಕಾಲು ಮುಂದೆ ಮಾಡುವ ಇಂದಿನ ಕಾಲದಲ್ಲಿ ಬಸವಣ್ಣನವರ ಈ ಆತ್ಮನಿರೀಕ್ಷಣೆ ಎಷ್ಟು ಜನಕ್ಕೆ ಬಂದೀತು? ಸಾಮಾಜಿಕ ವಿಮರ್ಶೆಯ ಸಂದರ್ಭದಲ್ಲೂ ಇದೇ ನೈಜಭಾವವನ್ನು, ಅಂತಃಕರಣದ ಕಳಕಳಿಯನ್ನು, ಮನದ

ಮರುಕವನ್ನು ಬಸವಣ್ಣನವರಲ್ಲಿ ಕಾಣುತ್ತೇವೆ. ಲೋಕದ ಡೊಂಕನ್ನು ತಿದ್ದಲು ಹೊರಡುವ ಮುನ್ನ ತನ್ನ ತನುಮನವನ್ನು ತಿದ್ದಿಕೊಂಡಿದ್ದಾನೆಯೇ ಎಂಬುದೇ ಪ್ರಶ್ನೆ. 'ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ' ಅವರಿಗೆ ಸಹಿಸದು. ನಿಜವಾದ ತಿಳವಳಿಕೆಯುಳ್ಳ ವ್ಯಕ್ತಿ ಯಾರಾದರೇನು? ಅಂಥವನಿಗೆ ಮೊದಲ ಮನ್ನಣೆ ಕೊಡುತ್ತಾರೆ ಬಸವಣ್ಣನವರು: 'ಹೊಲೆಯ ಹೊಲಬಿಗನಾದರೆ ಅವನ ಹೊರೆಯಲ್ಲಿಪ್ಪುದು ಕರಲೇಸು'. ಮನಸ್ಸಿನೊಳಗಿಲ್ಲದ ಬರಿಯ ತೋರಿಕೆಯ ಕೃತಿಗಳಲ್ಲಿ ಅವರಿಗೆಳ್ಳನಿತೂ ಆದರವಿಲ್ಲ. 'ತನುಮುಟ್ಟಿ ಮನ ಮುಟ್ಟದಿದ್ದರೆ ಕೂಡಲಸಂಗಮದೇವನೇತರಲ್ಲಿಯೂ ಮೆಚ್ಚ'. ಒಳಗೆ ಕುಟಿಲ, ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರನ್ನು ಕಂಡರೆ ಅವರಿಗಾಗದು. ಒಳ–ಹೊರಗಿನ ಸಾಮರಸ್ಯವೇ ಅಂತರಂಗ–ಬಹಿರಂಗ ಶುದ್ಧಿಯೇ ಬಸವಣ್ಣನವರು ಪ್ರತಿಪಾದಿಸುವ ಪ್ರಥಮ ಆಚಾರ. ಒಳಹೊರಗು ಒಂದಾಗದವರಿಗೆ ಅಳಿಯಾಸೆ ತೋರಿ ಜಗದೀಶ ಅವರನ್ನು ತೆಗೆದು ಬೀಸಾಡುತ್ತಾನಂತೆ. 'ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿ ಕಾಳಕೂಟ ವಿಷ'ವೆಂದು ತೀಕ್ಷ್ಣವಾಗಿಯೇ ಅವರು ನುಡಿದಿದ್ದಾರೆ.

ಜೀವದಯೆ ಬಸವಣ್ಣನವರ ವ್ಯಕ್ತಿತ್ವದ ಬಹುಮುಖ್ಯವಾದ ಮುಖ. ಅಂತೆಯೇ 'ದಯವಿಲ್ಲದ ಧರ್ಮ ಅದು ಏವುದಯ್ಯಾ?' ಎಂದು ಅವರು ಸವಾಲು ಹಾಕುತ್ತಾರೆ. ಉತ್ತಮ ಕುಲದಲ್ಲಿ ಹುಟ್ಟಿದೆನೆನ್ನುವ ಮಾತೇ ಅವರಿಗೆ ಕಷ್ಟತನದ ಹೊರೆಯಾಗಿ ಕಾಡುತ್ತಿತ್ತು. ಕೀಳು ಕುಲದವರೆಂದು ಬಗೆದು ಬೀಸಾಡಿದ ದಲಿತರನ್ನು ಶಿವಾಚಾರಕ್ಕೆ ಅರ್ಹರನ್ನಾಗಿ ಮಾಡಿ ಅವರನ್ನು ತಮ್ಮ ಆತ್ಮಕ್ಕೆ ಅಪ್ಪಿಕೊಂಡ ರೀತಿ ಅನನ್ಯವಾದದ್ದು. ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ ಮುಂತಾದವರಿಗೆ ಅವರು ಅತ್ಯಂತ ಹಿರಿಯ ಸ್ಥಾನವನ್ನು ನೀಡಿ ಗೌರವಿಸಿದರು. ವೇದ, ಆಗಮ, ತರ್ಕಶಾಸ್ತ್ರ ಮೊದಲಾದ ಕಟ್ಟುಗಳನ್ನೆಲ್ಲ ಮೀರಿ ಹರಿಯುತ್ತದೆ ಅವರ ಸರ್ವ ಜೀವ ದಯಾಪರವಾದ ಮಾನವೀಯತೆ. ಸಮಾಜದಲ್ಲಿ ಇದರ ದೆಸೆಯಿಂದ ಎಂಥ ಪ್ರತಿಭಟನೆಯನ್ನು ಅನುಭವಿಸಬೇಕಾಗಿ ಬಂತೆಂಬುದನ್ನು ಅವರ ವಚನವೊಂದು ಅಪರೋಕ್ಷವಾಗಿ ಸೂಚಿಸುತ್ತದೆ. ಅಲ್ಲದೆ, ನೈಜವಾದ ಅಂತಃಕರಣದ ಕಾರ್ಯಕ್ಕೆ ಮಾನವನಿರ್ಮಿತ ಕಟ್ಟುಪಾಡುಗಳು ಎದುರಿಸಿ ತಡೆಯಲಾರವೆಂಬುದನ್ನೂ ಅದು ವ್ಯಕ್ತಗೊಳಿಸಿದೆ:

**'ವೇದ ನಡನಡುಗಿತ್ತು ಶಾಸ್ತ್ರವಗಲಿ ಕೆಲಕ್ಕೆ ಸಾರಿತ್ತಯ್ಯ;**
**ತರ್ಕ ತರ್ಕಿಸಲರಿಯದೆ ಮೂಗುವಟ್ಟಿದ್ದಿತಯ್ಯ;**
**ಆಗಮ ಹೆರತೊಲಗಿ ಅಗಲಿ ಇದ್ದಿತ್ತಯ್ಯ;**
**ನಮ್ಮ ಕೂಡಲಸಂಗಯ್ಯನು ಚೆನ್ನಯ್ಯನ ಮನೆಯಲುಂಡ ಕಾರಣ.'**

ಆದುದರಿಂದ ಕುಲಜನೆಂಬುದಕ್ಕೆ ಬಸವಣ್ಣನವರು ಹೊಸ ವ್ಯಾಖ್ಯೆಯನ್ನೇ ನಿರ್ಮಿಸಬೇಕಾಯಿತು. 'ಸಕಲ ಜೀವಾತ್ಮರಿಗೆ ಲೇಸಬಯಸುವ'ವರೆಲ್ಲರೂ ಕುಲಜರು ಎಂಬುದಾಗಿ ಸಾರಿದರು.

ಬಸವಣ್ಣನವರ ಕಾಲದ ಸಾಮಾಜಿಕ ಪರಿಸ್ಥಿತಿಗೂ ಇಂದಿನ ಪರಿಸ್ಥಿತಿಗೂ ಸ್ಥೂಲವಾಗಿ ವಿಶೇಷ ಹೆಚ್ಚು ಕಡಿಮೆಯೇನೂ ಕಂಡುಬರದು. 'ದೈವದೈವವೆಂದು ಕಾಲಿಡಲಿಂಬಿಲ್ಲ'ದ ಸ್ಥಿತಿ ಎಲ್ಲಿ ಬದಲಾಗಿದೆ? ಮಾರಿ ಮಸಣಿಗಳಿಗೆ ಬೇರೆ ಹೆಸರನ್ನು ಕೊಟ್ಟಿರಬಹುದು, ಅಷ್ಟೆ. 'ಕಂಗಳು ತಪ್ಪಿ ನೋಡಿದರೆ ಮಾರಿ, ನಾಲಗೆ ತಪ್ಪಿ ನುಡಿದರೆ ಮಾರಿ' ಎಂಬ ಹಿತವಚನ ಇಂದಿಗೂ ಅಷ್ಟೇ ಆಪ್ಯಾಯನಕಾರಿ. ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ, 'ಒಂದನಾಡ ಹೋಗಿ ಒಂಬತ್ತನ್ನಾಡುವ ಅಜ್ಞಾನಿಗಳೆಲ್ಲರೂ' ಹಿರಿಯರೆನಿಸಿಕೊಂಡಿರುವುದನ್ನು ಕಂಡು ಕೂಡಲಸಂಗಮದೇವ ಈಗಲೂ ನಗುತ್ತಿದ್ದಾನೆ. ಒಳಿತೆನಿಸಿದುದರಲ್ಲಿ, ಉತ್ತಮವಾದುದರಲ್ಲಿ ಅಷ್ಟೊಂದು ನಂಬಿಗೆಯೇ ಇಲ್ಲ. 'ನಂಬಲರಿಯರೀ ಲೋಕದ ಮನಜರು', ಇಷ್ಟೇ ಅಲ್ಲ, 'ತಾವು ನಂಬರು. ನಂಬುವವರ ನಂಬಲೀಯರು; ತಾವು ಮಾಡರು, ಮಾಡುವವರ ಮಾಡಲೀಯರು', ಈ ಸಂದರ್ಭದಲ್ಲಿ 'ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಡುವಂತೆ' ಎಂಬ ಗಾದೆಯ ಮಾತನ್ನು ಬಸವಣ್ಣನವರು ಅತ್ಯಂತ ಔಚಿತ್ಯ ಪೂರ್ಣವಾಗಿ ಬಳಸಿದ್ದಾರೆ. ಇಂದಿನ ವಿಘಾತಕ ಶಕ್ತಿಗಳಲ್ಲಿ ಇದೂ ಒಂದೆಂದು ತೋರುತ್ತದೆ. ಮನವಿಲ್ಲದೆ ಮಾಡಿ ಮಾಡಿ ಕೆಟ್ಟವರು. ನಿಜವಿಲ್ಲದೆ ನೀಡಿ ನೀಡಿ ಕೆಟ್ಟವರು ಇಂದಿಗೂ ಅಸಂಖ್ಯರಿದ್ದಾರೆ. 'ಮಾಡುವ ನೀಡುವ ನಿಜಗುಣ'ವನ್ನು ಇಂದಿನ ಲೋಕ ಅಳವಡಿಸಿಕೊಳ್ಳಬೇಕಾಗಿದೆ. ಉಂಬಾಗ, ಉಡುವಾಗ, ಬಂಧುಗಳು ಬಂದಾಗ ಇಲ್ಲೆನ್ನುವ ಲಿಂಗಜಂಗಮಕ್ಕೆ ಇಲ್ಲೆಂಬ ಮನುಷ್ಯ ಸಾಯುವ ಹೊತ್ತಿನಲ್ಲಿ ತನ್ನ ದೇಹವನ್ನು ದೇಗುಲಕ್ಕೆ ಒಯ್ಯಿರೆಂದರೆ 'ದೇವರಿಗೆ ಹೆಣ ಬಿಟ್ಟಿ ಹೇಳಿತ್ತೆ?' ಎಂದು ಚುಚ್ಚಿ ನುಡಿಯುತ್ತದೆ ಬಸವಣ್ಣನವರ ವಾಣಿ. 'ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ' ಎಂದು ಅಂಥವರನ್ನು ಕುರಿತು ಮರುಕಗೊಳ್ಳುತ್ತದೆ. ಸಮಯೋಚಿತವನ್ನರಿಯದೆ ಔಪಚಾರಿಕವಾದ ಮಾತು ಕೃತಿಗಳಲ್ಲಿ ತೊಡಗಿದವರೇ ಹೆಚ್ಚು 'ಕೆಮ್ಮನೆ ಉಪಚಾರಕ್ಕೆ ಮಾಡುವವರು ನಿಮ್ಮನೆತ್ತಬಲ್ಲರು:' ಎಂದು ಅವರನ್ನೂ ಮೂದಲಿಸಿ ನುಡಿದಿದ್ದಾರೆ ಬಸವಣ್ಣನವರು. ಹೀಗೆ ವ್ಯಕ್ತಿ ಹಾಗೂ ಸಮಾಜದ ನಡವಳಿಕೆಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ಅವರು ತಮ್ಮ ಪ್ರತಿಕ್ರಿಯೆಯನ್ನು ನಿರ್ಭಯವಾಗಿ ವ್ಯಕ್ತಗೊಳಿಸಿದ್ದಾರೆ.

ಬಸವಣ್ಣನವರ ಬದುಕಿನ ನಿಷ್ಠೆ ಅಚಲವಾದದ್ದು. ಉರಿ ಬರಲಿ, ಸಿರಿ ಬರಲಿ 'ಬೇಕು' 'ಬೇಡ' ಎನ್ನದೆ ಅವರು ಅದನ್ನು ಸ್ವೀಕರಿಸಿದ್ದಾರೆ. ಕಾಯದ

ಕಳವಳಕ್ಕಂಜಿ 'ಕಾಯಯ್ಯಾ' ಎಂದಾಗಲಿ, 'ಜೀವನೋಪಾಯಕ್ಕಂಜಿ ಈಯಯ್ಯಾ ಎಂದಾಗಲಿ' ಅವರು ದೇವರನ್ನು ಬೇಡಲಿಲ್ಲ. ಅದಕ್ಕೆ ಬದಲಾಗಿ 'ನಾಳೆ ಬಪ್ಪುದು ನಮಗಿಂದೆ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ, ಇದಕಾರಂಜುವರು, ಇದಕಾರಳುಕುವರು?' ಎಂಬ ಧೀರತನವನ್ನು ತೋರಿ ಬಾಳಿದರು. 'ಮರಣವೆ ಮಹಾನವಮಿ' ಎಂದು ಸಾವಿಗೂ ಪಾವಿತ್ರ್ಯವನ್ನು ನೀಡಿದರು. ಅವರು ಮಾಡುವ ಪ್ರತಿಯೊಂದು ಕೆಲಸವೂ ಸಂಗಮದೇವನಲ್ಲಿ ಸಮರ್ಪಿತವಾಗಿದ್ದಿತು. 'ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ, ಸಲೆ ಕೈಕೂಲಿಯ ಮಾಡಿಯಾದರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ' ಎಂಬ ಅವರ ಮಾತೇ ಅದನ್ನು ಸಮರ್ಥವಾಗಿ ನಿರೂಪಿಸುತ್ತದಲ್ಲದೆ ಸತ್ಯ, ಸದಾಚಾರ, ಸದ್ಭಾವನೆಗಳ ಸಂಕೇತವೇ 'ಸಂಗಮದೇವನ ನಿಲವು' ಎಂಬುದನ್ನು ದೃಢಗೊಳಿಸುತ್ತದೆ. 'ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾನೆನು' ಎಂಬ ಧೀರ ನಿಲುಮೆಯನ್ನು ಕೊನೆಯವರೆಗೂ ಬಸವಣ್ಣನವರು ನಡೆಸಿಕೊಟ್ಟರು.

ಯಾವುದೋ ಪರಲೋಕದ ಚಿಂತೆಯಲ್ಲಿ ಈ ಲೋಕದ ಬಾಳನ್ನು ಅಸಡ್ಡೆಯಿಂದ ನೋಡುವುದನ್ನು ಖಂಡಿಸಿದ್ದಲ್ಲದೆ ಇಲ್ಲಿ ಸಲ್ಲುವುದರ ಅವಶ್ಯಕತೆಯನ್ನು ಬಸವಣ್ಣನವರು ಒತ್ತಿ ಹೇಳಿದ್ದಾರೆ. ಮರ್ತ್ಯಲೋಕವನ್ನು ಬ್ರಹ್ಮನ ಟಂಕಸಾಲೆಯೆಂದು ಕರೆದು ಇಲ್ಲಿ ನಡೆಯುವ ನಾಣ್ಯ ಎಲ್ಲೆಡೆಗೂ ನಡೆಯುತ್ತದೆ. ಇಲ್ಲಿ ಖೋಟಾ ಎನಿಸಿದ್ದು 'ಅಲ್ಲಿ'ಯೂ ಖೋಟಾ ನಾಣ್ಯವೇ ಎಂಬ ಅವರ ಮಾತು ಇಹ ಜೀವನದ ಪಾವಿತ್ರ್ಯವನ್ನೂ ಅದರ ಬೆಲೆಯನ್ನೂ ಪ್ರಕಾಶಗೊಳಿಸುತ್ತದೆ. ಇಲ್ಲಿ ಹೇಗೋ ಬಾಳಿ ಸತ್ತ ಮೇಲೆ ಸ್ವರ್ಗ ಸೇರುತ್ತೇನೆಂಬವರ ಅಜ್ಞಾನವನ್ನು ಅವರು ಮಾರ್ಮಿಕವಾಗಿ ಖಂಡಿಸಿದ್ದಾರೆ: 'ಸತ್ತ ಮೇಲೆ ಬೆರೆಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ' ಎಂದು ಭೂಮಿಯ ಭಾಗದ ಕಡೆಗಿರುವ ಅದರ ಸವಿಯನ್ನೂ, ಮೇಲ್ಭಾಗದಲ್ಲಿರುವ ಸವುಳನ್ನೂ ಎತ್ತಿ ತೋರಿಸಿದ್ದಾರೆ. 'ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ', 'ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನೊ', 'ಹಿಂದಣ ಜನನವೇನಾದರಾಗಲಿ ಇಂದಿನ ಭೋಗವು ಕಯ್ಯ ಮೇಲೆ'– ಇತ್ಯಾದಿ ನುಡಿ–ಕಿಡಿಗಳು ನಮ್ಮಲ್ಲಿ ಜೀವನೋತ್ಸಾಹದ ಸೆಲೆಯನ್ನು ಚಿಮ್ಮಿಸಿ ಕಾರ್ಯೋನ್ಮುಖರನ್ನಾಗಿ ಮಾಡುತ್ತವೆ. ಶರಣನಿಗೆ ದೇವಲೋಕ ಮರ್ತ್ಯಲೋಕವೆಂಬ ಸೀಮೆಯಿಲ್ಲ. ಅವೆರಡೂ ಈ ಲೋಕದಲ್ಲಿಯೇ ಇವೆ. ಉತ್ತಮ ಬಾಳನ್ನು ಬಾಳುವ ಭಕ್ತನ ಅಂಗಳವೇ ವಾರಣಾಸಿ, ಅವನ ಕಾಯವೇ ಕೈಲಾಸ. 'ಆಚಾರವೇ ಸ್ವರ್ಗ, ಅನಾಚಾರವೇ ನರಕ', 'ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ'

ಎಂದು ಹೇಳಿ, ಯಾವುದೋ ಪೌರಾಣಿಕರು ಕಲ್ಪಿಸಿದ ಸ್ವರ್ಗ ನರಕಗಳ ದೆವ್ವ ಬಡಿದು ಕುಳಿತ ಜನಾಂಗದ ಕಣ್ಣು ತಿಳಿಗೊಳಿಸಿದರು ಬಸವಣ್ಣನವರು. ಧರಣಿಯ ಮೇಲೆ ಹಿರಿದಪ್ಪ ಅಂಗಡಿಯನ್ನಿಟ್ಟು ಕುಳಿತಿರುವ ಮಹದೇವಶೆಟ್ಟಿ ಸಮತೂಕದ, ನ್ಯಾಯದ ವ್ಯವಹಾರವನ್ನು ಬಯಸುತ್ತಾನೆ. ಕಾಣಿಯ ಸೋಲದ, ಅರ್ದ್ಧಗಾಣಿಯ ಗೆಲ್ಲದ ಜಾಣತನದ ಬಾಳನ್ನು ನಡೆಸಬೇಕು. ಪವಿತ್ರವಾದ ಮನುಷ್ಯದೇಹ ಯಾವುದೋ ಕ್ಷುಲ್ಲಕ ಕಾರ್ಯಕ್ಕೆ ಭೂಮಿಗೆ ಬಂದಿಲ್ಲ. 'ಕೂಡಲ ಸಂಗಮದೇವನೊಲಿಸಬಂದ ಪ್ರಸಾದಕಾಯವ ಕೆಡಿಸಲಾಗದು.' ಬಸವಣ್ಣನವರ ಜೀವನ ದೃಷ್ಟಿಯನ್ನು ಈ ವಚನ ಸಂಗ್ರಹವಾಗಿ ನಿರೂಪಿಸುತ್ತದೆ:

**ಸುಖ ಬಂದರೆ ಪುಣ್ಯದ ಫಲವೆನ್ನೆನು,**
**ದುಃಖ ಬಂದರೆ ಪಾಪದ ಫಲವೆನ್ನೆನು;**
**ನೀ ಮಾಡಿದೊಡಾಯಿತ್ತೆಂದೆನ್ನೆನು,**
**ಕರ್ಮಕ್ಕೆ ಕರ್ತುವೆ ಕಡೆಯೆಂದೆನ್ನೆನು,**
**ಉದಾಸೀನವಿಡಿದು ಶರಣೆನ್ನೆನು,**
**ಕೂಡಲಸಂಗಮದೇವಾ, ನೀ ಮಾಡಿದುಪದೇಶವು**
**ಎನಗೀ ಪರಿಯಲಿ;**
**ಸಂಸಾರವ ಸವೆಯ ಬಳಸುವೆನು.**

ಸಂಸಾರದ ಯಾವ ಭೋಗ-ಭಾಗ್ಯಗಳೂ, ಸುಖ-ಸಂತೋಷಗಳೂ ಬಳಕೆಗೆ ಹೊರತಾಗಬಾರದು. ಸಂಸಾರ ಸುಖವನ್ನು ಪಡೆದವನೇ ಜೀವನವನ್ನು ಸಮಗ್ರ ದೃಷ್ಟಿಯಿಂದ ನೋಡಬಲ್ಲ. ಬಾಳಿನಲ್ಲಿ ಬರುವ ಸುಖ-ದುಃಖಗಳಿಗೆ ಪುಣ್ಯ-ಪಾಪದ ಲೇಪವನ್ನು ಅಂಟಿಸದೆ ಕರ್ತವ್ಯವನ್ನು ನಿರ್ವಹಿಸುವ ಶುದ್ಧ ಕಾಯಕ ದೃಷ್ಟಿಯನ್ನು ಇಲ್ಲಿಯೂ ಕಾಣಬಹುದು.

ಶರಣ ಆದರ್ಶಮಾನವನ ಪ್ರತೀಕ. ಮಾನವ ಜೀವನದ ನಿಜವಾದ ಮೌಲ್ಯಗಳನ್ನು ಅರಳಿಸಿ ಶಿವಪಥದಲ್ಲಿ ಸಾಗಿದವನೇ ಶರಣ. ಆತನನ್ನು ಎಲ್ಲೋ ಮಠಮಾನ್ಯಗಳಲ್ಲಿ ಅರಸಬೇಕಿಲ್ಲ. ಸಾಮಾನ್ಯ ಮಾನವ ಮಧ್ಯದಲ್ಲಿಯೂ ಆತನಿದ್ದಾನೆ. ಬಡತನದಲ್ಲೂ ಶ್ರೀಮಂತ ಗುಣಗಳನ್ನು ಹೊಂದಿದ್ದಾನೆ:

**ಮನೆ ನೋಡಾ, ಬಡವರು; ಮನ ನೋಡಾ ಘನ;**
**ಸೋಂಕಿನಲ್ಲಿ ಸುಖಿ; ಸರ್ವಾಂಗ ಕಲಿಗಳು;**
**ಪಸಾರಕ್ಕನುವಿಲ್ಲ; ಬಂದ ತತ್ಕಾಲಕ್ಕುಂಟು;**
**ಕೂಡಲಸಂಗನ ಶರಣರು ಸ್ವತಂತ್ರ ಧೀರರು.**

ಮನೆ ಸಣ್ಣದು. ಆದರೆ ಮನಸ್ಸು ಬಹು ದೊಡ್ಡದು. ಅದರ ಸಾನ್ನಿಧ್ಯವೇ ಸುಖಕರವಾದದ್ದು. ಪ್ರಸಂಗ ಬಂದಾಗ ವೀರವನ್ನೂ ಮೆರೆಯಬಲ್ಲವರು. ಆಡಂಬರಕ್ಕೆ ಅನುವಿಲ್ಲ, ಆದರೆ ಸಮಯಕ್ಕೆ ತಕ್ಕ ಆದರೋಪಚಾರಕ್ಕೆ ಕೊರತೆಯಿಲ್ಲ. ಸ್ವತಂತ್ರ ಧೀರರಾದ ಇಂಥ ಶರಣರಿಗೆ ಬಸವಣ್ಣನವರು ಮಾರುಹೋಗಿದ್ದಾರೆ. 'ಶರಣರ ಸಂಗದಲ್ಲಿರ್ದು ಶಿವನ ಬೇಡುವ ಹಂಗೇಕಯ್ಯಾ?' ಎಂದು ಅವರು ಕೇಳುತ್ತಾರೆ. ಅವರಿಗೆ ಅವರ ಒಡನಾಟವೊಂದಿದ್ದರೆ ಸಾಕು, ಬೇರೆ ಪದವಿ ಬೇಕಿಲ್ಲ. 'ಎನಗೆ ಮರ್ತ್ಯ ಲೋಕದ ಮಹಾಗಣಂಗಳುಂಟು. ಇದು ಕಾರಣ, ಕೂಡಲಸಂಗಮ ದೇವರ ಲೋಕವ ಹಂಚಿಕೊಳ್ಳಿ ನಿಮನಿಮಗೆ' ಎಂದು ಉಳಿದವರಿಗೆ ಅದನ್ನು ಬಿಟ್ಟುಕೊಟ್ಟಿದ್ದಾರೆ. ಅನ್ಯರ ಮನೆಗೆ ಹೋಗಿ ತಮ್ಮುದರವ ಹೊರೆಯದ ಅಚ್ಚ ಶರಣರಲ್ಲಿಯೇ ಕೂಡಲ ಸಂಗಯ್ಯನನ್ನು ಅವರು ಕಂಡಿದ್ದಾರೆ. ಶರಣರೆಂದರೆ ಅವರಿಗೆ ಅಷ್ಟೊಂದು ಅಚ್ಚುಮೆಚ್ಚು. ದೇವರೆದುರು ಸೆಟೆದು ನಿಂತಾರು. ಆದರೆ ಶರಣರೆದುರು ನವ್ರವಾಗಿ ಅವರ ಒಲವನ್ನು ಬಯಸುತ್ತಾರೆ. 'ಕೂಡಲಸಂಗಮದೇವಾ, ನಿಮಗೆ ವೀರನಪ್ಪೆ, ನಿಮ್ಮ ಶರಣರಿಗೆ ವಧುವಪ್ಪೆ' ಎಂದು ತಮ್ಮ ಅಂತರ್ಗತವನ್ನು ಆಡಿ ತೋರಿಸಿದ್ದಾರೆ. 'ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪ' ಶರಣರನ್ನು ಕಾಣುವ ಕಣ್ಣನ್ನು ಬಸವಣ್ಣನವರು ನಮಗೆ ಕೊಟ್ಟಿದ್ದಾರೆ. ಆಸತ್ತೆ, ಅಲಸಿದೆ, ಬೇಸತ್ತೆ, ಬೆಂಬಿದ್ದೆ, ಏವೇನೇವೆನೆಂದರೂ ಕಾಯದ ಕರ್ಮದ ಫಲಭೋಗ ಬಿಡಲಾರದು. ಅಂಥ ಸಂದರ್ಭದಲ್ಲಿ ಶರಣರ ಸೂಳ್ನುಡಿಯೊಂದು ದೊರೆತರೆ ಸಾಕು ಈ ಜೀವ ಬದುಕಿಕೊಳ್ಳುತ್ತದೆ.

ಭಕ್ತಿಯೇ ಬಸವಣ್ಣನವರ ಬದುಕಿನ ಶೈಲಿಯಾಗಿದೆ. 'ಭಕ್ತಿ'ಯೆಂಬ ಪದದಲ್ಲಿ ಅವರು ತಮ್ಮ ಬದುಕಿನ ಸಾರಸಾರಾಯವನ್ನೆಲ್ಲ ತುಂಬಿದ್ದಾರೆ. ಅದರ ವ್ಯಾಪ್ತಿಯನ್ನು ಹೆಚ್ಚಿಸಿದ್ದಾರೆ. ಜೀವನದ ಎಲ್ಲ ಸದ್ಗುಣಗಳ ಸದಾಚಾರದ, ಸಮಯೋಚಿತ ನಡವಳಿಕೆಯ, ಸೌಂದರ್ಯ ಭಾವವೆಲ್ಲ ಅದರಲ್ಲಿ ಸಮಾವಿಷ್ಟಗೊಂಡಿದೆ. ಅದು ಡಂಬುಡಳಹು ತೋರದ ಹೃದಯಾಂತರಾಳದ ಸೆಲೆ, ತನುವುಕ್ಕಿ ಮನವುಕ್ಕಿ ಮಾಡುವುದೇ ಅದರ ಲಕ್ಷಣ. 'ಓಡಲಾರದ ಮೃಗವು ಸೊಣಗಂಗೆ ಮಾಂಸವ ಕೊಡುವಂತೆ' ತನ್ನ ಯಾವುದೋ ದೌರ್ಬಲ್ಯವನ್ನು ಪ್ರಯೋಜನಪಡಿಸಿಕೊಳ್ಳುವ ಗುಣವಲ್ಲ. ಹರಕೆ ಹೊತ್ತು, ಹತ್ತು ಜನರನ್ನು ಕೂಡಿಸಿ ಮಾಡುವುದೂ ಅಲ್ಲ. 'ಹರಸಿ ಮಾಡುವುದು ಹರಕೆಯ ದಂಡ; ನೆರಹಿ ಮಾಡುವುದು ಡಂಭಿನ ಭಕ್ತಿ' ಎಂದು ಅವರು ಸ್ಪಷ್ಟವಾಗಿಯೇ ನುಡಿದಿದ್ದಾರೆ. ನಿಜದ ಬೆಲೆಯನ್ನರಿಯದೆ ಮಾಡುವ ಕಾರ್ಯಗಳೆಲ್ಲ ಸುಮ್ಮನೆ ಬಳಲಿಕೆ. 'ನಿಜವನರಿಯದ ಭಕ್ತ ಬಳಲುವನಲ್ಲದೆ ಲಿಂಗ

ಬಳಲುವುದೆ?' ಅದು ಎರೆದರೆ ನೆನೆಯದು, ಮರೆದರೆ ಬಾಡದು. ಅಂಥ ಲಿಂಗಾರ್ಚನೆಯಲ್ಲಿ ಹುರುಳಿಲ್ಲ. ಬಸವಣ್ಣನವರ ಭಕ್ತಿ ಅವರದೇ ಆದ ವೈಶಿಷ್ಟ್ಯವನ್ನು ಪಡೆದಿದೆ. ಉಳಿದ ಶರಣರೆಲ್ಲ ಜಂಗಮ, ಬಸವಣ್ಣನೊಬ್ಬನೇ ಭಕ್ತ ಎಂದು ಮೆಚ್ಚಿ ನುಡಿದಾಗ ಅವರು ಹೇಳಿದ ಮಾತು ತುಂಬ ಮಾರ್ಮಿಕವಾಗಿದೆ. 'ನಾನೊಬ್ಬನೇ ಭಕ್ತನು, ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮ ಲಿಂಗ ನೀನೆ, ಅಯ್ಯ.' ಈ ಭಾವ ಬಲಿದು ಗಟ್ಟಿಗೊಂಡುದರಿಂದಲೇ ಬಸವಣ್ಣನವರು ಎಲ್ಲರಿಗೂ ಪರಮಾರಾಧ್ಯರಾದರು. ಅದು ಬರೀ ಬಾಯಿ ಮಾತಿನ ಭಕ್ತಿಯಲ್ಲ. 'ಮಾಡಿ ತನು ಸವೆಯದನ್ನಕ್ಕ, ಮನ ಸವೆಯದನ್ನಕ್ಕ, ಧನ ಸವೆಯದನ್ನಕ್ಕ ಅಪ್ಪುದೆ ಭಕ್ತಿ.' ಭಕ್ತಿಯ ಸಾಧನೆಯಲ್ಲಿ ಉದಾಸೀನವಿಲ್ಲದೆ ಮೈತುಂಬ ಎಚ್ಚರಿಕೆ ಹೊಂದಿರಬೇಕು. ಇಡೀ ವರ್ಷ ಹೊಲದಲ್ಲಿ ಬದುಕು ಮಾಡಿ ಒಟ್ಟಿದ ಮೇವಿನ ಬಣಿವೆಯನ್ನು ಒಂದು ಕಿಡಿ ಸುಟ್ಟು ಹಾಕುವಂತೆ ಸಲೆ ನೆಲೆ ಸನ್ನಿಹಿತವಾಗಿರ್ಪ ಶರಣರ ಭಕ್ತಿ ಒಂದೇ ಒಂದು ಅಕ್ರಮ ಕೃತ್ಯದಿಂದ ಕೆಟ್ಟು ಹೋಗುತ್ತದೆ. ಭಕ್ತಿ ಹೀಗೆ ಆಂತರ್ಯದ ಉತ್ತಮಿಕೆಯನ್ನೆಲ್ಲ ನಡೆನುಡಿಗಳಲ್ಲಿ ಹೊರಹೊಮ್ಮಿಸುತ್ತದೆ. 'ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು' ಎಂಬ ಒಂದು ಮಾತಿನಲ್ಲಿ, ತಮ್ಮ ಭಾವವನ್ನೆಲ್ಲ ಅರ್ಥ ಭಾರವನ್ನೆಲ್ಲ ಬಸವಣ್ಣನವರು ಭಟ್ಟಿಯಿಳಿಸಿದ್ದಾರೆ. ಭಕ್ತನ ಶುದ್ಧಾಂತಃಕರಣವೆಲ್ಲ, ಲಿಂಗ ಗುಣಗಳೆಲ್ಲ ಅವನ ಮುಖದಲ್ಲಿ ಪ್ರತಿಫಲಿಸಿರುವುದನ್ನು ಕಾಣುತ್ತಾರೆ. ತನ್ನ ಮೈಮನಸ್ಸುಗಳಿಂದ ದುಡಿದು ಭಕ್ತಿಯನ್ನು ಸಲ್ಲಿಸಬೇಕಲ್ಲದೆ ಸೋಮಾರಿತನದಿಂದಾಗಲಿ ಹೆರವರ ಹಣದಿಂದಾಗಲಿ ಸಲ್ಲಿಸಲಾಗದು. 'ಕಾಯಕವೇ ಕೈಲಾಸ' ಎಂಬ ಅವರ ಮಾತು ಅವರ ಅಖಂಡ ಜೀವನಾನುಭವದ ಅಮೃತವಾಣಿಯಾಗಿದೆ. ಅದರ ಕಿರಣಗಳೆಲ್ಲ ಅವರ ವಚನಗಳಲ್ಲಿ ಹರಡಿಕೊಂಡಿವೆ. 'ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು 'ಹಾಸಿ ದುಡಿದರೆ ತನಗುಂಟು, ತನ್ನ ಪ್ರಮಥರಿಗುಂಟು' ಹೀಗೆ ಪವಿತ್ರವಾದ ದುಡಿಮೆಯ ಧೀರತನದಿಂದ ಬಸವಣ್ಣನವರ ಬದುಕು ಬಂಗಾರವಾಗಿದೆ.

ದೇವರು ಕೊಟ್ಟರೆ ಎಲ್ಲಾ ಉಂಟು ಎನ್ನುತ್ತೇವೆ. ದೇವರು ಸುಮ್ಮನೆ ಕೊಡುವುದಿಲ್ಲ. ಅದಕ್ಕೆ ತಕ್ಕ ಸಿದ್ಧತೆ ಮನುಷ್ಯನಲ್ಲಿ ಇರಬೇಕಾಗುತ್ತದೆ. ಉಳಿದ ಶಕ್ತಿಗಳೆಲ್ಲ ಸತತವಾಗಿ ಕೆಲಸ ಮಾಡುತ್ತ ಆ ಹೊತ್ತಿಗೆ ಸನ್ನಿಹಿತವಾಗಿ 'ಕೃತಿ'ಯಾಗಿ ಮಾರ್ಪಡುತ್ತದೆ. ಕೊರಡು ಕೊನರುವುದೂ ಬರಡು ಹಯನಾಗುವುದೂ ಸಕಲ ಪಡಿ ಪದಾರ್ಥ ಇದಿರಲ್ಲಿಪ್ಪುದೂ ಅಂಥ ಸಮರ್ಪಣಭಾವ ಬಲಿದಾಗ ಸಾಧ್ಯವಾಗುತ್ತದೆ. ಹಲವು ಹನ್ನೊಂದಕ್ಕೆ ಹಾಯದೆ ಒಬ್ಬ ದೇವನಲ್ಲಿ ಮನಸ್ಸು ಕೇಂದ್ರೀಕೃತವಾದಾಗ ಅದು ಸಾರ್ಥಕಗೊಳ್ಳುತ್ತದೆ.

ಮುನ್ನೂರರವತ್ತು ನಕ್ಷತ್ರಕ್ಕೆ ಬಾಯಿ
ಬಿಟ್ಟುಕೊಂಡಿಪ್ಪುದೇ ಸಿಂಪು?
ಅದು ಸ್ವಾತಿಗಲ್ಲದೆ ಬಾಯ್ದೆರೆಯದು
ಕೇಳು ಕೇಳಾ ತಂದೆ
ಎಲ್ಲವಕ್ಕೆ ಬಾಯಿಬಿಟ್ಟರೆ
ತಾನೆಲ್ಲಿಯ ಮುತ್ತಪ್ಪುದೋ?

ಎಂಬ ದೃಷ್ಟಾಂತದಲ್ಲಿ ಒಬ್ಬ ದೇವನಲ್ಲಿಯ ಅವರ ತಾದಾತ್ಮ್ಯಭಾವವೆಲ್ಲ ವ್ಯಕ್ತಗೊಂಡಿದೆ. ಅದಕ್ಕೆಂದೇ 'ಆರಿಗಾರೂ ಇಲ್ಲಾ, ಕೆಟ್ಟವಂಗೆ ಕೆಳೆಯಿಲ್ಲ, ಜಗದ ನಂಟ ನೀನೇ ಅಯ್ಯ' ಎಂದು ಅದು ನಂಬಿಕೊಂಡಿದೆ. 'ಕರ್ಮಫಲಗೂಡಿ ಕೂಡಲಸಂಗಮದೇವಂಗೆ ಆತ್ಮ ನೈವೇದ್ಯವ ಮಾಡಿದ' ಧನ್ಯತೆ ಅವರದು. ಬಸವಣ್ಣನವರ ಭಾಷೆ ಭಕ್ತಿಯ ಭಾಷೆ; ನುಡಿ ಅಂತಃಕರಣದ ಕುಡಿ. ಅವರ ನಡೆ ಆ ಕುಡಿಬಿಟ್ಟ ಹೂವು. ಆತ್ಮ ನಿರೀಕ್ಷಣೆಯಿಂದ ಕಾಳಿಕೆಯನ್ನೆಲ್ಲ ಕಳೆದುಕೊಂಡು, ನಡೆಯೊಳಗೆ ನುಡಿಯನ್ನು ಪೂರೈಸಿದ ಬಸವಣ್ಣನವರ ಬದುಕು ಚೊಕ್ಕ ಚೆನ್ನವಾಗಿ, ಶರಣರ ಪಾದಕ್ಕೆ ತೊಡಿಗೆಯಾಗುವ ಕಿಂಕರ ವೃತ್ತಿಯಲ್ಲಿ ತೊಳಗಿ ಬೆಳಗಿತ್ತು. ತೊಟ್ಟರೆ ಜೀವನದಲ್ಲಿ ಅವರಂತೆ ವೀರ ಪ್ರತಿಜ್ಞೆಯನ್ನು ತೊಡಬೇಕು, ಅವರ ಹಾಗೆಯೇ ಅದನ್ನು ಈಡೇರಿಸಿ ತೋರಿಸಬೇಕು. ಅವರು ಕೊಟ್ಟ ವಚನವಿದು.

ಭಕ್ತಿಯ ಸುಭಾಷೆಯ ನುಡಿಯ
ನುಡಿವೆ, ನುಡಿದಂತೆ ನಡೆವೆ,
ನಡೆಯೊಳಗೆ ನುಡಿಯ ಪೂರೈಸುವೆ
ಮೇಲೆ ತೂಗುವ ತ್ರಾಸು
ಕಟ್ಟಳೆ ನಿಮ್ಮ ಕೈಯಲ್ಲಿ;
ಒಂದು ಜವೆ ಕೊರತೆಯಾದರೆ
ಎನ್ನನದ್ದಿ ನೀನೆದ್ದು ಹೋಗು,
ಕೂಡಲಸಂಗಮದೇವಾ.

ನಡೆ-ನುಡಿಯ ಸಮನ್ವಯವೇ ಬಸವಣ್ಣನವರ ವ್ಯಕ್ತಿತ್ವದ ವಜ್ರಪಿಂಡವಾಗಿದ್ದಿತು. ಕೈಯಲ್ಲಿ ತಕ್ಕಡಿ ಹಿಡಿದು ಮೇಲೆ ಕೂತಿರುವ ಕೂಡಲಸಂಗಮದೇವ ಒಂದು ಕೂದಲೆಳೆಯಷ್ಟು ಏರು-ಪೇರಾಗದಂತೆ ಬಾಳಿದ ಇವರ ಅಚ್ಚ ಬದುಕನ್ನು ಕಂಡು ಅಚ್ಚರಿಗೊಂಡಿರಬೇಕು. ಅವರ ಪ್ರತಿಯೊಂದು ಕಾರ್ಯಕ್ಕೂ ಕೂಡಲ ಸಂಗಮದೇವ ಸಾಕ್ಷಿಯಾಗಿರುವಂತೆ ಅವರ ವ್ಯಕ್ತಿತ್ವ ಹಾಗೂ ಜೀವನದ ಸಿದ್ಧಿಯನ್ನು ಅರಿಯಲು

ಅವರ ಹೃದಯದಿಂದ ಹೊರಹೊಮ್ಮಿದ ವಚನಗಳು ಸಾಕ್ಷಿಯಾಗಿವೆ. 'ಕೂಡಲಸಂಗಮದೇವಾ, ರತ್ನಮೌಕ್ತಿಕದಚ್ಚು ನಿಮ್ಮ ಶರಣರು' ಎಂದು ಶರಣರ ಗುಣವನ್ನು ಬಣ್ಣಿಸಿದ ಬಸವಣ್ಣನವರ ಮೂರ್ತಿತ್ವದಲ್ಲಿಯೇ ಆ ಎಲ್ಲ ಗುಣಗಳೂ ಉನ್ನತ ಮಟ್ಟದಲ್ಲಿ ಒಳಗೊಂಡಿದ್ದವು. ಅಂತೆಯೇ ಬಸವಣ್ಣನೆಂಬ ಜ್ಯೋತಿ ಮುಟ್ಟಿಸಲು ಅಲ್ಲಿ ಬೆಳಗಿದ್ದೆಲ್ಲ ಶಿವನ ಪ್ರಕಾಶವೇ ಆಯಿತು. ಅಸಂಖ್ಯಾತ ಶರಣರಿಗೆ ಅದೇ ಅರಿವಿನ ಬೆಳಕಾಯಿತು.

*(ಸಮಾಹಿತ: ೧೯೭೯)*



೩



# ಬಸವಣ್ಣನವರ ವಚನಗಳ ಆಶಯ

ಪ್ರಬಲವಾದ ಆತ್ಮಶಕ್ತಿಯಿಂದ ಪರಿಸರದೊಡನೆ ಹೋರಾಡಿ ತನ್ನ ಯುಗದ ಮನೋಧರ್ಮವನ್ನೇ ಪರಿವರ್ತಿಸಿದ ಬಸವಣ್ಣನ ಮುಖ್ಯ ಕಾರ್ಯ ಧಾರ್ಮಿಕವಾಗಿದ್ದರೂ ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರವನ್ನು ಅದು ವ್ಯಾಪಿಸಿಕೊಂಡಿತು. ಉದಾರವೂ ಉದಾತ್ತವೂ ಆದ ತತ್ವಗಳನ್ನೊಳಗೊಂಡ ವೀರಶೈವ ಧರ್ಮ ಅವರ ಕ್ರಿಯಾತ್ಮಕ ಧೋರಣೆಯಿಂದ ಹೊಸ ಚೈತನ್ಯವನ್ನು ಪಡೆದು, ಮಾನವ ಧರ್ಮದ ಮಹಾಭಾಗ್ಯವನ್ನು ಜನತೆಗೆ ನೀಡುವಂತಾಯಿತು. ಜನಸಾಮಾನ್ಯರ ಉದ್ಧಾರವೇ ಅವರ ಮುಖ್ಯ ಗುರಿಯಾಗಿದ್ದರೂ ಅವರ ಹೃದಯದಿಂದ ಹೊರಹೊಮ್ಮಿದ ನುಡಿಗಳು ಭಾವತೀವ್ರತೆ, ಅನುಭವದ ಸಹಜ ಅಭಿವ್ಯಕ್ತಿ ಹಾಗೂ ವಚನ ಪ್ರಭೇದದ ಸೊಗಸಿನಿಂದ ಅವರನ್ನು ವಚನಕಾರರ ಶ್ರೇಷ್ಠ ಪ್ರತಿನಿಧಿಯನ್ನಾಗಿ ಮಾಡಿದೆ.

ಬಿಜ್ಜಳನ ಕೈಕೆಳಗೆ ಒಂದು ಪ್ರಧಾನವಾದ ಅಧಿಕಾರದಲ್ಲಿದ್ದ ಬಸವಣ್ಣನವರಿಗೆ ರಾಜಕೀಯ ಜೀವನದ ನಿಕಟ ಪರಿಚಯವಿದ್ದಿತಲ್ಲದೆ ಅದರ ಅಸ್ಥಿರತೆಯ ಅರಿವೂ ಇದ್ದಿತು. ಧರ್ಮದ ನಿಜಸ್ವರೂಪ ಮಸುಳಿಸಿ, ಅಂಧಶ್ರದ್ಧೆ, ಅಹಂಕಾರ, ಆಡಂಬರಗಳೇ ಅಟ್ಟಹಾಸಗೈಯುತ್ತಿರುವಾಗ ಸಾಮಾಜಿಕ ಜೀವನ ವೈಷಮ್ಯಭಾವದಿಂದ ಕಲುಷಿತಗೊಂಡು ಸುಲಿಗೆ ಶೋಷಣೆಗಳಿಂದ ಸಂಕಟಕ್ಕೆ ಒಳಗಾದಾಗ, ಬಸವಣ್ಣನವರು ಅದನ್ನು ಅತ್ಯಂತ ಧೈರ್ಯದಿಂದ ಪ್ರತಿಭಟಿಸಿ, ಮೂಲಭೂತವಾದ ಬದಲಾವಣೆಗೆ

ಕೈಹಾಕಿದರು. ಸ್ವತಂತ್ರ ವಿಚಾರಶೀಲತೆಯ, ಸರ್ವಸಮಾನತೆಯ, ನವಸಮಾಜ ನಿರ್ಮಾಣದಿಂದ ಪ್ರೇರಿತವಾಗಿ ಲೋಕದ ವಿರೋಧವನ್ನೂ ಲೆಕ್ಕಿಸದೇ ಅದನ್ನು ಪ್ರತ್ಯಕ್ಷವಾಗಿ ಕಾರ್ಯರೂಪದಲ್ಲಿ ತಂದು, ನಿಜವಾದ ಕ್ರಾಂತಿಕಾರಿಯೆನಿಸಿದರು. ಭಕ್ತಿ ಸಾಧನೆಯ ಭಾವಶುದ್ಧಿಯಿಂದ, ನೈತಿಕ ನಿಷ್ಠೆಯಿಂದ, ಆತ್ಮಶೋಧನೆಯ ಬಲದಿಂದ, ಗಂಡು ಹೆಣ್ಣೆನ್ನದೆ, ಉಚ್ಚ ನೀಚ ಕುಲವೆನ್ನದೆ, ಆತ್ಮೋನ್ನತಿಯ ಆಧ್ಯಾತ್ಮಿಕ ಪದವನ್ನು ಎಲ್ಲರಿಗು ಮುಕ್ತಗೊಳಿಸಿ ಮಹಾ ಮಾನವತಾವಾದಿಯೆನಿಸಿದರು. ಧಾರ್ಮಿಕ ಸಾಮಾಜಿಕ ಸುಧಾರಕರಾಗಿ ಅವರ ಮನಸ್ಸನ್ನು ತೀವ್ರವಾಗಿ ಕಾಡಿದ ಅಂಶಗಳು, ಸಾಮಾಜಿಕ ಸಂವೇದನೆಯಿಂದ ಅವರ ವಚನಗಳಲ್ಲಿ ಅಭಿವ್ಯಕ್ತಿ ಪಡೆದಿವೆ. ತನ್ನ ಕಾಲದ ಅಗತ್ಯಗಳನ್ನೆಲ್ಲ ಅರಿತು ಸಮಾಜದ ಬದುಕಿನೊಂದಿಗೆ, ಅದರ ಕಷ್ಟ ಸುಖಗಳೊಂದಿಗೆ ಸ್ಪಂದಿಸಿ, ಅದನ್ನು ಧ್ವನಿಸುವ ವಾಣಿಯಾದ ಬಸವಣ್ಣನವರ ವಚನಗಳಲ್ಲಿ ಅವರ ಆಶಯವನ್ನು ಸ್ಪಷ್ಟವಾಗಿ ಗುರುತಿಸಬಹುದು.

ವ್ಯಕ್ತಿಯ ಬೋಧೆ ಜನಮನದಲ್ಲಿ ನಾಟಬೇಕಾದರೆ ಅವನ ಆಚಾರ ವಿಚಾರಗಳು ಪರಿಶುದ್ಧವಾಗಿರಬೇಕು. ಅವನ ನಡೆಯೇ ಒಂದು ಆದರ್ಶವಾಗಿ ತೋರಬೇಕು ಹಾಗೆ ನಡೆದು ನುಡಿದು ತೋರಿಸಿದ ಬಸವಣ್ಣನವರು ಒಳ ಹೊರ ಜಗತ್ತಿನ ಹೊಂದಾಣಿಕೆಯನ್ನು ಸಾಧಿಸಿದರು. ಅಂತರಂಗ ಶುದ್ಧಿಗೆ ಪ್ರಥಮ ಸ್ಥಾನವನ್ನು ನೀಡಿ, ತಮ್ಮ ಮನಸ್ಸನ್ನು ತಾವೇ ಪರೀಕ್ಷಿಸಿಕೊಂಡು, ಪರಮಾತ್ಮನ ಸಾಕ್ಷಾತ್ಕಾರ ಪಡೆಯುವ ವರೆಗಿನ ಹೋರಾಟದ ಏಳುಬೀಳುಗಳನ್ನೆಲ್ಲ ಅನುಭವಿಸಿದ್ದರಿಂದ ಅವರ ಭಕ್ತಿ ಸಾಧನೆಯಲ್ಲಿ ಮನುಷ್ಯತ್ವದಿಂದ ದೇವತ್ವಕ್ಕೇರಿದ ಮನುಷ್ಯ ಸಹಜವಾದ ರಸಭಾವ ವಿಶೇಷಗಳು ನಮಗೆ ಹೆಚ್ಚು ಆತ್ಮೀಯವಾಗಿ ತೋರುತ್ತವೆ.

'ಭಕ್ತಿ ಎನ್ನುವುದು ಭಗವಂತನಲ್ಲಿಡುವ ನಿಶ್ಚಲ ಪ್ರೇಮ' ತನ್ನ ಅವಗುಣಗಳೊಡನೆ, ಅರಿಷಡ್ವರ್ಗದೊಡನೆ ನಡೆಸುವ ಒಂದು ಹೋರಾಟ; ಮನಸ್ಸನ್ನು ಪರಮಾತ್ಮನಲ್ಲಿ ಸೇರಿಸುವ ಒಂದು ಸಾಧನೆ' ಶುದ್ಧಾಂತಃಕರಣದಿಂದ ಮೂಡಿದ ವಿಚಾರಪೂರ್ವಕವಾದ ಶ್ರದ್ಧೆ ಬಸವಣ್ಣನವರ ಭಕ್ತಿಯ ಸ್ವರೂಪವನ್ನು ಬೆಳಗಿಸಿದೆ. ಜಗತ್ತನ್ನು ಉದ್ಧಾರ ಮಾಡಲು ಹೊರಡುವ ಮೊದಲು ತನ್ನನ್ನು ತಾನು ತಿದ್ದಿಕೊಂಡು, ತನ್ನ ಲೋಪ ದೋಷಗಳನ್ನು ನಿವಾರಿಸಿಕೊಳ್ಳುವುದು ಅತ್ಯಗತ್ಯ.

**ಲೋಕದ ಡೊಂಕ ನೀವೇಕೆ ತಿದ್ದುವಿರಿ ?**
**ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ;**
**ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ.**
**ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ**
**ಕೂಡಸಂಗಮದೇವ.** (ಬ.ಷ.ವ.೧೨೪)

ತನ್ನ ತನುಮನದ ಶುದ್ಧಿ ಭಕ್ತಿಯ ಪ್ರಥಮ ಸೋಪಾನ. ಹಾಗೆಯೇ ಸಮಾಜೋದ್ಧಾರಕ್ಕೆ ಹೊರಡುವವರಿಗೂ ಇದು ಬಸವಣ್ಣನವರು ಹೇಳಿದ ಕಿವಿಮಾತು. ಹೊರಗೆ ಸುಂದರವಾಗಿ ಕಂಡರೂ ಒಳಗೆ ಕಲುಷಿತಗೊಂಡು ಈಶನ ವಾಸಕ್ಕೆ ಅಯೋಗ್ಯವಾಗಿರುವ 'ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ' ಎಂದುಕೊಂಡು ಬಸವಣ್ಣನವರು, ಮನೆಯ ಮುಂದೆ ಹುಲ್ಲು ಬೆಳೆದು, ಮನೆಯೊಳಗೆ ಧೂಳು ತುಂಬಿದ್ದರೆ ಆ ಮನೆಗೆ ಯಾರೂ ದಿಕ್ಕಿಲ್ಲವೆಂಬುದನ್ನು ಸೂಚಿಸುವಂತೆ, 'ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲ' ಎಂದು ಕೂಡಲಸಂಗಮದೇವನಲ್ಲಿ ತಮ್ಮ ಮನಸ್ಸನ್ನು ತೋಡಿಕೊಂಡರು. 'ಮರನೇಜಿದ ಮರ್ಕಟನಂತೆ ಹಲವು ಕೊಂಬೆಗೆ ಹಾರುತ್ತಿರುವ' ಮನದ ಚಂಚಲತೆಯನ್ನು ಹೊರಗಿನ ಆಕರ್ಷಣೆಗೆ ಒಳಗಾಗಿ, ಬಯಸಿ ಬೆನ್ನುಹತ್ತಿ, 'ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ' ಅದು ಪಡುವ ನೋವನ್ನು, ಒಂದು ಕ್ಷಣ ಉಚ್ಚ ವಿಚಾರದಲ್ಲಿ ಮಗ್ನವಾಗಿದೆ ಎಂದುಕೊಂಡರೂ ಮರುಕ್ಷಣದಲ್ಲಿ 'ಅಂದಣವನೇಜಿದ ಸೊಣಗನಂತೆ ಕಂಡೊಡೆ ಬಿಡದ' ಅದರ ಸ್ವಭಾವವನ್ನು 'ಕಂಬಳಿಯಲ್ಲಿ ಕಣಕವ ನಾದಿದಂತೆ' ಒಳಿತಾದುದನ್ನೂ ತನ್ನಂತೆ ಕೆಡಿಸುವದರಲ್ಲಿಯೇ ತೊಡಗುವ ಅದರ ವೃತ್ತಿಯನ್ನು ಕಂಡುಂಡ ಅವರು ತಮ್ಮನ್ನು 'ಲಿಂಗವ್ಯಸನಿ ಜಂಗಮ ಪ್ರೇಮಿ' ಎಂದೆನಿಸಿ 'ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು' ಎಂದು ಆರ್ತಭಾವದಿಂದ ಬೇಡಿಕೊಂಡಿದ್ದಾರೆ.

ಮನದ ಪರಿ ಹೀಗಾದರೆ, ಇರವಿನ ಪರಿ ಅದಕ್ಕೂ ಶೋಚನೀಯ. ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ' ತನಗರಿವಿಲ್ಲದೆಯೇ ಅದು ಮೃತ್ಯುಗಧೀನವಾಗಿದೆ. 'ಹಬ್ಬಕ್ಕೆ ತಂದ ಹರಕೆಯ ಕುಜಿ ತೋರಣಕ್ಕೆ ತಂದ ತಳಿರ ಮೇಯಿತ್ತು.' ಮನುಷ್ಯ ಜೀವನದ ದುರಂತತೆಯನ್ನೇ ಕಣ್ಣೆದುರು ನಿಲ್ಲಿಸಿದಂತಿದೆ ಈ ವಚನ. "ಕೊಂದವರುಳಿದರೇ" ಎಂಬ ಪ್ರಶ್ನೆಯಿಂದ ಬಸವಣ್ಣನವರು ಹಿಂಸಾಪರವಾದ ಇಡಿಯ ಮಾನವಜನಾಂಗದ ಕಣ್ಣನ್ನೇ ತೆರೆದಿದ್ದಾರೆ. ಆದುದರಿಂದ 'ಕೆಡುವೊಡಲ ನಚ್ಚಿ ಕಡು ಹುಸಿಯನೆ ನುಡಿದು, ಒಡಲ ಹೊರೆವರ' ಭವಗಂತ ಒಲ್ಲ. ಅವನನ್ನರಿಯಲು ವೇದಶಾಸ್ತ್ರಾದಿಗಳು ಸಹಕಾರಿಗಳಲ್ಲ; ಆತ 'ನಾದಪ್ರಿಯನಲ್ಲ, ವೇದಪ್ರಿಯನಲ್ಲ, ಭಕ್ತಿಪ್ರಿಯ.' ಜೀವನದ ಘನೋದ್ದೇಶವನ್ನು ಮರೆತು ದುಃಖಭಾಗಿಯಾಗದೆ ಅರಿತು ಶರಣಾಗಬೇಕಾದರೆ ಭಕ್ತಿಭಾವ ಅತ್ಯವಶ್ಯ. ಆದರೆ ಭಕ್ತಿಯ ಹಾದಿ ಅಷ್ಟು ಸುಲಭವಲ್ಲ. ನಿಶ್ಚಲವಾದ, ನಿಷ್ಕಪಟವಾದ ಆತ್ಮಾರ್ಪಣೆಗೆ ಭಕ್ತ ಸಿದ್ಧನಾಗಬೇಕು. 'ಭಕ್ತಿಯೆಂಬುದ ಮಾಡಬಾರದು,

ಕರಗಸದಂತೆ ಹೋಗುತ್ತ ಕೊಯ್ದುದು, ಬರುತ್ತ ಕೊಯ್ವುದು,' ಅಷ್ಟೊಂದು ತೀಕ್ಷ್ಣ ಪರೀಕ್ಷೆಗೆ ಭಕ್ತನಾದವನು ಒಳಗಾಗಬೇಕಾಗುತ್ತದೆ.

**ನಚ್ಚಿದೆನೆಂದಡೆ, ಮಚ್ಚಿದೆನೆಂದಡೆ, ಸಲೆಮಾಱುವೋದೆನೆಂದಡೆ**
**ತನುವನಲ್ಲಾಡಿಸಿ ನೋಡುವೆ ನೀನು ,**
**ಮನವನಲ್ಲಾಡಿಸಿ ನೋಡುವೆ ನೀನು,**
**ಧನವನಲ್ಲಾಡಿಸಿ ನೋಡುವೆ ನೀನು,**
**ಇವೆಲ್ಲಕ್ಕಂಜದಿದ್ದಡೆ ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ.** *(ಬ.ಷ.ವ.೨೧೪)*

ವಿನಯ ಭಕ್ತಿಯ ಪ್ರಥಮ ಲಕ್ಷಣ. 'ಸದುವಿನಯವೇ ಸದಾಶಿವನ ಒಲುಮೆಯಯ್ಯಾ'. ಆದರೆ ಆ ವಿನಯ, ನಮ್ರತೆಗಳು ಸತ್ವಪೂರ್ಣವಾಗಿರಬೇಕು. 'ಬೀಗಿಬೆಳೆದ ಗೊನೆಬಾಳೆಯಂತೆ ಬಾಗಿಕೊಂಡಿದ್ದರೆ' ಬೇಡಿದ ಪದವಿ. 'ದಿಟಪುಟಭಕುತಿ ಸಂಪುಟ' ನೆಲೆಗೊಳ್ಳಬೇಕಲ್ಲದೆ ತೋರಿಕೆಯದಲ್ಲ, ಇಲ್ಲದಿದ್ದರೆ 'ಹೆಂಡದ ಮಡಿಕೆಯ ಹೊರಗೆ ತೊಳೆದಂತೆ' ಒಳಗಿನ ಅಶುದ್ಧಿ ಡಾಂಭಿಕತೆಯ ದುರ್ಗುಣವನ್ನೇ ಮೆರೆಯುತ್ತದೆ. ನಿಜವಾದ ಭಕ್ತ ಮೈತುಂಬ ಎಚ್ಚರವುಳ್ಳವನಾಗಿರಬೇಕು. 'ಕೋಟಿ ಸನ್ಮಾನವ ಮಾಡಿದರೇನು? ನಿಮಿಷದ ಉದಾಸೀನ ಕೆಡಿಸಿತ್ತು.' ತತ್ಕಾಲ ಪ್ರೇಮವನರಿಯದೆ ವಿಭವಕ್ಕೆ ಮಾಡಿದವನ ಭಕ್ತಿ 'ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ' ನಿರುಪಯುಕ್ತ ಹಾಗೂ ವ್ಯರ್ಥ. 'ಓಡಲಾಗದ ಮೃಗವು ಸೋಣಗಂಗೆ ಮಾಂಸವ ಕೊಡುವಂತೆ' ಅದು ಅಸಾಮರ್ಥ್ಯದ ಅನಿವಾರ್ಯತೆಯಾಗಬಾರದು. ತನುವುಕ್ಕಿ ಮನವುಕ್ಕಿ ಭಕ್ತಿಯನ್ನು ಮಾಡಬೇಕು, ಮಾಡಿಸಿಕೊಳ್ಳಬೇಕು.

ಸಂಸಾರವೇ ಸಾರಸರ್ವಸ್ವವೆಂದೂ ಅದು ಶಾಶ್ವತ ಸುಖವೆಂದೂ ಭ್ರಮಿಸಿ, ಅದರಲ್ಲಿಯೆ ಮಗ್ನನಾದವಗೆ ಭಕ್ತಿ ಕೈವಶವಾಗದು. ಸಂಸಾರದಲ್ಲಿರುವವರೆಗೆ ಅಂಗವನು ತಾನು, ತನ್ನದು ಎಂದು 'ಊರ ಸೀರೆಗೆ ಅಗಸ ತಡಬಡಿಹಡೆದಂತೆ' ಕಾತರಗೊಳ್ಳುವುದೇ. 'ಸಂಸಾರ ಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯ' ಎಂದು ಅದರಿಂದ ತನಗಾದ ವಿಪತ್ತನ್ನು ಕಂಡುಕೊಂಡು 'ಶೂಲದ ಮೇಲಣ ಭೋಗವೇನಾದರೇನೋ' ಎಂದು ಅದರ ದುರಂತ ಪರಿಣಾಮವನ್ನು ಬಸವಣ್ಣನವರು ಬಣ್ಣಿಸಿದ್ದಾರೆ. ಆದರೆ ಈ ಜಗತ್ತು, ಸಂಸಾರ, ಮದುವೆ, ದುಃಖ, ತಾಮಸ ಇದೂ ಕೂಡ ಭಗವಂತನೇ ಮಾಡಿದ್ದಲ್ಲವೇ? ಅವನ ಅನುಗ್ರಹವಿಲ್ಲದೆ ಸಂಸಾರ ಬಿಡದು. 'ನಾನೀ ಮಾಯೆಯ ಗೆದ್ದೆನೆಂಬ ಹಮ್ಮಿದೇಕೆ? ಎಂದ ಪ್ರಾಮಾಣಿಕ ಅನುಭವ ಅವರದು. ಮನಸ್ಸು ಅದರಲ್ಲಿ ಮುಳುಗಿ ಹೋಗಿ ಕೂಡಲಸಂಗನ ಸೇವೆಗೆ ವೇಳೆ ಇಲ್ಲದಾಗಿದೆ. 'ಬೆರಣಿಯನಾಯಲಲ್ಲದೆ ಅಟ್ಟುಣ್ಣ ತೆರಹಿಲ್ಲೆನಗೆ', ಎಂದು ಕಳವಳಗೊಂಡು,

**ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ,**
**ಪಶುವೇನ ಬಲ್ಲದು? ಹಸುರೆಂದೆಳೆಸುವುದು.**
**ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ,**
**ಸುಬುದ್ಧಿಯೆಂಬುದಕವನೆಱೆದು,**
**ನೋಡಿ ಸಲಹಯ್ಯಾ, ಕೂಡಲಸಂಗಮದೇವಾ.** (ಬ.ಷ.ವ. ೫೧)

ಎಂದು ಮನಸ್ಸನ್ನು ತನ್ನತ್ತ ಎಳೆದುಕೊಂಡು ಕರುಣಿಸುವಂತೆ ಮೊರೆಯಿಟ್ಟಿದ್ದಾರೆ. 'ನಿಮ್ಮ ಸೊಮ್ಮು ನಿಮಗೆ ಸಲಿಸುವೆನು', 'ನಿಮ್ಮ ನಿಲುವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ' ಎಂಬ ಧೀರತನದಿಂದ ಕೂಡಲ ಸಂಗಮನಲ್ಲಿ ಸಮಾಧಾನಪಟ್ಟುಕೊಂಡು, ಅವರು ತಮ್ಮ ಅಂತರಂಗದ ಬೆಳವಣಿಗೆಗೆಲ್ಲ ಭಗವಂತನನ್ನೇ ಸಾಕ್ಷಿಯಾಗಿಟ್ಟುಕೊಂಡು ಸಾಗಿದರು. 'ಎನ್ನ ತಪ್ಪನೊಪ್ಪ ಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು' ಎಂದು ಬೇಡಿಕೊಳ್ಳುತ್ತ 'ಕೆಲಕ್ಕೆ ಶುದ್ಧನಾದೆನಲ್ಲದೆ ಎನ್ನ ಮನಕ್ಕೆ ಶುದ್ಧನಾಗೆನಯ್ಯ' ಎಂದು ಹಲವು ವಿಧದಲ್ಲಿ ತಮ್ಮನ್ನೇ ತಾವು ಪರೀಕ್ಷೆ ಮಾಡಿಕೊಳ್ಳುತ್ತಿದ್ದರು. ಯಾರಾದರೂ ಮೆಚ್ಚಿ ಹೊಗಳಿದರೆ ಅದಕ್ಕೆ ಎಳ್ಳಷ್ಟೂ ಮನಸೋಲದ ನೈತಿಕ ನಿಷ್ಠುರತೆ ಅವರದು. 'ನೀನೆನಗೊಳ್ಳಿದನಾದರೆ, ಎನ್ನ ಹೊಗಳ್ತೆಗಡ್ಡಬಾರಾ ಧರ್ಮಿ' ಎಂದು ಕೂಡಲಸಂಗಮದೇವನಲ್ಲಿ ಅವರ ನಿರಂತರ ಪ್ರಾರ್ಥನೆ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಕಿಂಕರತ್ವದಿಂದ 'ಮಾಡುವಾತ ನಾನಲ್ಲಯ್ಯ, ನೀಡುವಾತ ನಾನಲ್ಲಯ್ಯ' ಎಂಬ ನಿರಹಂಭಾವದಿಂದ ಪರಮಾತ್ಮನ ನೆನಹೇ ಜೀವನವಾದ ಸರ್ವಸಮರ್ಪಣ ಭಕ್ತಿಯ ಭಾವದಲ್ಲಿ ಪರಾಕಾಷ್ಠತೆಯನ್ನು ಪಡೆದಿದ್ದಾರೆ.

**ಎನ್ನ ಕಾಯವ ದಂಡಿಗೆಯ ಮಾಡಯ್ಯಾ;**
**ಎನ್ನ ಸಿರವ ಸೋರೆಯ ಮಾಡಯ್ಯಾ:**
**ಎನ್ನ ನರವ ತಂತಿಯ ಮಾಡಯ್ಯಾ;**
**ಎನ್ನ ಬೆರಳ ಕಡ್ಡಿಯ ಮಾಡಯ್ಯಾ**
**ಬತ್ತೀಸರಾಗವ ಹಾಡಯ್ಯಾ; ಉರದಲೊತ್ತಿ ಬಾರಿಸು,**
**ಕೂಡಲಸಂಗಮದೇವಾ.** (ಬ.ಷ.ವ. ೫೦೦)

ಇಂಥ ಒಂದು ಪರಮಾನಂದ ಸ್ಥಿತಿಯನ್ನು ಪಡೆದ ಅವರ ಹೃದಯದಲ್ಲಿ ಪರಮಾತ್ಮನ ದರ್ಶನವಾಗಿ 'ಸಮರತಿ ಸಮಕಳೆ ಸಮಸುಖ'ವನರಿತು ನದಿಯೊಳಗೆ ನದಿ ಬೆರೆಸಿದಂತಾಯಿತು.

ಹೀಗೆ ಅಂತರಂಗ ನಿರೀಕ್ಷಣೆ, ಆತ್ಮಪರೀಕ್ಷೆ, ಭಕ್ತಿಯ ಪರಾಕಾಷ್ಠತೆಗಳಿಂದ ವಿಶಿಷ್ಟವಾದ ಆಶಯಕ್ಕೆ ಅವರ ವಚನಗಳು ಕನ್ನಡಿ ಹಿಡಿದಿವೆ. ಇಂಥ ಒಂದು ಅತ್ಯುಚ್ಚ ಅನುಭವವನ್ನು ಪಡೆದಮೇಲೆ ಬಸವಣ್ಣನವರು ಈ ಲೋಕವನ್ನು, ಜನತೆಯನ್ನು ಮರೆತುಬಿಡಲಿಲ್ಲ. ಭಕ್ತರ ಒಡನಾಟದಲ್ಲಿ, ಅವರ ಸೇವೆಯಲ್ಲಿ ಮುಕ್ತಿಸುಖವನ್ನು ಕಾಣುತ್ತ, ಶರಣರ ಮಧ್ಯದಲ್ಲಿರುವುದನ್ನೇ ಅವರು ಬಯಸಿದರು.

**ಬ್ರಹ್ಮ ಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ,**
**ರುದ್ರ ಪದವಿಯನೊಲ್ಲೆ,**
**ಮತ್ತಾವ ಪದವಿಯನೊಲ್ಲೆನಯ್ಯಾ !**
**ಕೂಡಲಸಂಗಮದೇವಾ, ನಿಮ್ಮ ಸದ್ಭಕ್ತರ**
**ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯ.** (ಬ.ಷ.ವ. ೩೬೦)

ಇಂಥ ಒಂದು ಹಿರಿಯ ಆದರ್ಶದ ಸಾಧನೆಯಲ್ಲಿ ಬಸವಣ್ಣನವರಿಗೆ ತಮ್ಮ ಅಂದಂದಿನ ಕುಂದು ಕೊರತೆಗಳು ಸ್ವಲ್ಪ ಹೆಚ್ಚಾಗಿಯೇ ಕಂಡಿರಬೇಕು. ಕೆಲವರಿಗೆ ಇದು ಅಲ್ಲಲ್ಲಿ ಆತ್ಮದೂಷಣೆಗಿಂತ ಭಿನ್ನ. 'ಬಸವಣ್ಣನ ಹಾಗೂ ಬೇರೆ ಶರಣರ ವಚನಗಳನ್ನು ವಿಮರ್ಶಿಸುವಾಗ ಈ ವ್ಯಕ್ತಿತ್ವನಿಷ್ಠವಾದ ನಿರ್ವಚನವನ್ನು ಮಾಡಬೇಕು. ಅವುಗಳಲ್ಲಿ ಆಧ್ಯಾತ್ಮಿಕ ಭಾವಗೀತೆಯ ಸತ್ವವಿದೆಯೆಂಬುದನ್ನು ಕಾಣಬೇಕು' ಎಂಬ ಅಭಿಪ್ರಾಯವನ್ನು ಇಲ್ಲಿ ಗಮನಿಸಬೇಕು. ಬಸವಣ್ಣನವರು 'ಹೀಗೆ ವಿಶ್ವಪಾತ್ರರಾಗಿ ಏರ್ಪಟ್ಟಿರುವುದು ಅವರು ಮಾನವ ಜನ್ಮಕ್ಕೆ ಸಾಮಾನ್ಯವಾದ ಸ್ಥಾಯೀಭಾವ', ರಸವಿಶೇಷಗಳಿಗೆ ಆಶ್ರಯರಾಗಿರುವುದರಿಂದಲೇ, ಅವುಗಳ ಪರಿಣಾಮದಿಂದ ಮಾನಸಿಕ ವ್ಯಾಪಾರವನ್ನು ಪ್ರಕಾಶಪಡಿಸಿರುವದರಿಂದಲೆ, ಎಂಬುದನ್ನು ಜೊತೆಯಲ್ಲಿಯೆ ನೆನೆಯಬೇಕು.

ಬಸವಣ್ಣನವರು ತತ್ಕಾಲೀನ ಜನಜೀವನದ ಸಮಸ್ಯೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಅಂದಿನ ಸಮಾಜದ ಲೋಪದೋಷಗಳನ್ನು ಅವರು ನಿರ್ದಾಕ್ಷಿಣ್ಯವಾಗಿ ತೋರಿಸಿಕೊಟ್ಟಿದ್ದಾರೆ. ಸಮಾಜದ ಕಟುಟೀಕೆಯಲ್ಲೂ ಅಂಥ ವ್ಯವಸ್ಥೆಯ ಬಗ್ಗೆ ಸಾತ್ವಿಕ ಸಂತಾಪ ಒಡೆದು ಕಾಣುತ್ತದಲ್ಲದೆ ದ್ವೇಷಭಾವನೆಯಿಲ್ಲ. ಕೆಲವು ಆಚರಣೆಗಳು ಒಳ್ಳೆಯ ಉದ್ದೇಶದಿಂದಲೇ ಪ್ರಾರಂಭವಾಗಿದ್ದರೂ ಬರುಬರುತ್ತ ಅವು ಬರಿ ಸಂಪ್ರದಾಯವಾಗಿ ಜಡವಾಗಿ ಸಮಾಜಕ್ಕೆ ಅಹಿತಕಾರಿಯಾಗಿ ಪರಿಣಮಿಸುತ್ತವೆ. ವಿಚಾರಶೀಲರೂ ಆಜನ್ಮ ಕ್ರಾಂತಿಕಾರಿಗಳೂ ಆದ ಬಸವಣ್ಣನವರು ಧರ್ಮದ ಸ್ವರೂಪವನ್ನು ವಿಶಾಲವಾದ ಅರ್ಥದಲ್ಲಿ ನೋಡಿ ಗೊಡ್ಡು ಆಚಾರಗಳಿಂದ, ಮೂಢನಂಬಿಕೆಗಳಿಂದ ಅದನ್ನು ಬಿಡಿಸಿ ಮನುಷ್ಯನ ಹೃದಯ ಬುದ್ಧಿಗಳ

ಸಮುಚಿತವಾದ ಬೆಳವಣಿಗೆಗೆ ಅದು ನೆರವಾಗುವಂತೆ ಮಾಡಿದರು. ಮನುಷ್ಯ ಮನುಷ್ಯರಲ್ಲಿಯ ಭಿನ್ನಭೇದಗಳನ್ನು ವರ್ಗಗಳ ಜಾತಿಗಳ ತಾರತಮ್ಯಗಳನ್ನು ಹಾಗೂ ಸಾಮಾಜಿಕ ಅನ್ಯಾಯಗಳನ್ನು ಕಂಡು ಅವರ ಮನಸ್ಸು ಕುದಿಯಿತು. ಕೆಳಗೆ ತಳ್ಳಲ್ಪಟ್ಟ ಜನವನ್ನು ಮೇಲೆತ್ತಿ ಎಲ್ಲರಿಗೂ ಧಾರ್ಮಿಕ ಸಮಾನತೆಯನ್ನು ಕೈಗೂಡಿಸಿಕೊಟ್ಟರು. ಜನರ ಮೂಢನಂಬಿಕೆಗಳನ್ನೇ ಅವಲಂಬಿಸಿದ್ದ ಹಲವಾರು ಕ್ಷುದ್ರ ದೈವಗಳ ಆರಾಧನೆಯನ್ನು ಅವರು ತಪ್ಪಿಸಿ ಏಕದೇವೋಪಾಸನೆಯನ್ನು ಬಿಂಬಿಸಿದರು.

**ಅರಗು ತಿಂದು ಕರಗುವ ಧೈವ,**
**ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯ?**
**ಅವಸರ ಬಂದರೆ ಮಾಱುವ ದೈವವನೆಂತು ಸರಿಯೆಂಬೆನಯ್ಯಾ?**
**ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ?**
**ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೈವ.**
(ಬ.ಷ.ವ. ೪೪೮)

ಎಂದು ಮನಸ್ಸಿಗೆ ನಾಟುವ ವಿಡಂಬನೆ ಮಾಡಿದರು. ಲೋಗರ ಬೇಡಿಕೊಂಡುಂಬ ದೈವಂಗಳು ತಾವೇನ ಕೊಡುವವು? ಎಂದು ಚುಚ್ಚಿ ಕೇಳಿದರು. ಇಂಥ 'ನೂಱು ಮಡಕೆಗೆ ನಮ್ಮ ಕೂಡಲಸಂಗಮದೇವ ಶರಣೆಂಬುದೊಂದು ದಡಿ ಸಾಲದೆ?' ಎಂದು ಸಮರ್ಥವಾಗಿ ಪ್ರತಿಪಾದಿಸಿದರು. ಹಾಗೆಯೇ ಸಾಮಾನ್ಯ ಜನತೆಗೆ ಜ್ಯೋತಿಷ್ಯ ಮೊದಲಾದ್ದರಲ್ಲಿಯ ಅತಿಯಾದ ನಂಬಿಕೆ ಅವರನ್ನು ಪರಾವಲಂಬನೆಗೂ, ಆಲಸ್ಯಕ್ಕೂ ಈಡುಮಾಡಿದ್ದಿತು. ಅದಕ್ಕಾಗಿ;

**ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,**
**ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ**

ಎಂದು ಅವರಲ್ಲಿ ಕಾರ್ಯಪ್ರವೃತ್ತಿಯನ್ನು, ಉತ್ಸಾಹವನ್ನು ತುಂಬಿದರು.

ಬಸವಣ್ಣನವರು ರೂಪಿಸಿಕೊಂಡ ಸಾಮಾಜಿಕ ವ್ಯವಸ್ಥೆಯಲ್ಲಿ ಮತ ವೃತ್ತಿ ಲಿಂಗಭೇದಗಳೆಲ್ಲ ಅಳಿದು ಶಿವಭಕ್ತಿಸಾಧನೆಯೊಂದೇ ತಳಹದಿಯಾಯಿತು. 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರನ್ನೆಲ್ಲ ಒಂದೇ' ಎಂಬ ಅವರ ಉದಾರವಾದ ಮನೋಧರ್ಮ, ಕುಲ, ಜಾತಿ, ರೂಢಮೂಲವಾದ ಪರಂಪರೆಗಳಿಗೆ ಮಹತ್ವಕೊಡದೆ ಗುಣ, ಯೋಗ್ಯತೆ, ಶೀಲಗಳಿಗೆ ಪ್ರಾಶಸ್ತ್ಯವಿತ್ತಿತು. ಮಾನವರಲ್ಲಿಯೇ ಒಂದು ವರ್ಗವನ್ನು ಹೊಲೆಯರೆಂದು ಮುಟ್ಟಿಸಿಕೊಳ್ಳದೆ ಊರ ಹೊರಗಿಟ್ಟು ನಡೆಸಿಕೊಳ್ಳುತ್ತಿದ್ದ ರೀತಿ

ಅವರ ಮನಸ್ಸನ್ನು ಆಳವಾಗಿ ಕಲಕಿತು. ಹೊಲೆಯೆನ್ನುವದು ಒಂದು ಜಾತಿಯಲ್ಲ. ಎಲ್ಲ ವರ್ಗದಲ್ಲಿಯೂ, ಎಲ್ಲ ಸಮಾಜದಲ್ಲಿಯೂ ಅಂಥವರು ಇದ್ದೇ ಇದ್ದಾರೆ.

**ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ!**
**ಕುಲವೇನೋ, ಆವಂದಿರ ಕುಲವೇನೋ?**
**ಸಕಲ ಜೀವಾತ್ಮರಿಗೆ ಲೇಸನೇ ಬಯಸುವ**
**ನಮ್ಮ ಕೂಡಲಸಂಗನ ಶರಣರೇ ಕುಲಜರು.** (ಬ.ಷ.ವ. ೫೯೨)

ಸಕಲ ಜೀವಿಗಳಿಗೂ ಒಳಿತನ್ನು ಬಯಸಿದ ನಿಜವಾದ ಸಮಾಜವಾದ ಇದು. ತಾವು ಉತ್ತಮಕುಲದಲ್ಲಿ ಹುಟ್ಟಿದವರೆಂಬ ಮಾತೇ ಬಸವಣ್ಣನವರಿಗೆ ಕಷ್ಟತನದ ಹೊರೆಯಾಗಿತ್ತು. ಸದ್ಗುಣ ಸದಾಚಾರಗಳು ಯಾವುದೇ ಜಾತಿಗೆ ಮೀಸಲಾದವುಗಳಲ್ಲ. ಇಲ್ಲವೇ ಹುಟ್ಟಿನಿಂದ ಬಂದವುಗಳೂ ಅಲ್ಲ. ಈ ಅಸ್ಪೃಶ್ಯತಾ ಭಾವನೆಯನ್ನು ಬಸವಣ್ಣನವರು ಸಂಪೂರ್ಣವಾಗಿ ತೆಗೆದುಹಾಕಿ, 'ಹೊಲೆಯ ಹೊಲಬಿಗನಾದರೆ ಅವನ ಹೊರೆಯಲ್ಲಿಪ್ಪುದು ಲೇಸು ಕಂಡಯ್ಯಾ' ಎಂದು, ಹೀನಕುಲದಲ್ಲಿ ಜನಿಸಿದರೂ ಶಿವಭಕ್ತರಾದ ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ ಅವರನ್ನು ಹಿರಿಯರಂತೆ ಭಾವಿಸಿ, ನಿತ್ಯಜೀವನದಲ್ಲಿ ಅದನ್ನು ಆಚರಣೆಗೆ ತಂದರು.

ಬಸವಣ್ಣನವರು ಏರ್ಪಡಿಸಿದ ಸಮಾಜದಲ್ಲಿ ಸ್ವಾತಂತ್ರ್ಯ, ಸರ್ವಸಮಾನತೆ, ಪರಸ್ಪರ ಬಂಧುಭಾವಗಳು ಅದರ ಮೂಲಾಧಾರಗಳಾಗಿವೆ. ಅಂಗದ ಮೇಲೆ ಲಿಂಗವ ಧರಿಸಿದವರೆಲ್ಲ ಕೂಡಲಸಂಗನೆಂದೇ ಅವರ ದೃಢವಾದ ಭಾವನೆ. ಭಕ್ತರೆಲ್ಲ ಒಂದೇ ಜಾತಿ, ಪರಸ್ಪರ ಸಮಾನರು. ಅವರ ವೃತ್ತಿ ಯಾವುದಾದರೂ ಆಗಿರಲಿ, ಲಿಂಗಧಾರಿಗಳಾಗುವ ಮೊದಲು ಯಾವ ಜಾತಿಯವರೇ ಆಗಿದ್ದಿರಲಿ, ಅವುಗಳನ್ನು ಗಮನಿಸದೆ ಸಹಭೋಜನ, ವೈವಾಹಿಕ ಸಂಬಂಧಗಳು ಬೆಳೆದು ಬರುವಂತೆ ಪ್ರೇರೇಪಿಸಿದರು.

**ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತೆಂಬರು.**
**ಕೊಂಬಲ್ಲಿ ಕೊಡುವಲ್ಲಿ ಕುಲವನಱಸುವರು.**
**ಎಂತಯ್ಯಾ, ಅವರ ಭಕ್ತರೆಂಬೆ?**
**ಎಂತಯ್ಯಾ, ಅವರು ಯುಕ್ತರೆಂಬೆ?** (ಬ.ಷ.ವ. ೬೨೯)

ಎಂಬ ಮಾರ್ಮಿಕವಾದ ಪ್ರಶ್ನೆಯಿಂದ ಅಂಥವರ ಮನಸ್ಸಿನ ಅಳುಕನ್ನು ನಿವಾರಿಸಿದರು.

ಬಹುಕಾಲದಿಂದ ಸ್ತ್ರೀಯನ್ನು ಅವಜ್ಞೆಯಿಂದ ಕಾಣುತ್ತ ಬಂದುದನ್ನು ಬಸವಣ್ಣನವರು ಸಹಿಸಲಿಲ್ಲ. 'ನಡುವೆ ಸುಳಿಯುವಾತ್ಮನು ಗಂಡೂ ಅಲ್ಲ, ಹೆಣ್ಣೂ

ಅಲ್ಲ' ಎಂದ ದೇವರ ದಾಸಿಮಯ್ಯನ ಎಲ್ಲ ಮಾತನ್ನು ವಚನಕಾರರೂ ಅನುಸರಿಸಿದರು. ಸ್ತ್ರೀಯನ್ನು ಹೀಗಳೆದು ಸಂಸಾರವನ್ನು ಕಡೆಗಣಿಸುವುದು ಅವರ ಮಾರ್ಗವಾಗಿರಲಿಲ್ಲ. ಸ್ತ್ರೀಯರಿಗೆ ಪುರುಷರಂತೆಯೇ ಸಮಾನವಾದ ಹಕ್ಕುಗಳನ್ನೂ ಗೌರವವನ್ನೂ ನೀಡಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಸ್ತ್ರೀ ಪುರುಷರೊಡನೆ ಸಮಾನಳೆಂಬುದನ್ನು ಬಸವಣ್ಣನವರು ಎತ್ತಿ ಹಿಡಿದರು. ಪರವಧುವನ್ನು ಮಹಾದೇವಿ ಎಂದು ಕಂಡರು. ಸ್ತ್ರೀಯರಿಗೂ ಲಿಂಗದೀಕ್ಷೆ ಮತ್ತು ಷಟ್ಸ್ಥಲ ಸಾಧನ ಮಾರ್ಗವನ್ನು ತೆರೆದು ಸಮಾನಾವಕಾಶವನ್ನು ನೀಡಿದರು. ಇದರಿಂದ ನೂರಾರು ಶರಣಶರಣೆಯರು ನಿಸ್ಸಂಕೋಚವಾಗಿ ಅನುಭವ ಮಂಟಪದ ಆಧ್ಯಾತ್ಮಿಕ ಚರ್ಚೆಯಲ್ಲಿ ಭಾಗವಹಿಸುವಂತಾಯಿತು. ಭಕ್ತಿಯ ಸಾಧನೆಯಲ್ಲಿ ಸತಿಪತಿಗಳೊಂದಾಗಿದ್ದರೆ, ಅವರ ಬಾಳು ಸಫಲಗೊಳ್ಳುವದು. 'ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ' ಹೀಗೆ 'ಭಾಂಡ-ಭಾಜನ ಶುದ್ಧವಿಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ'.

**ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,**
**ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ**
**ಇದ್ದರೇನೋ ಶಿವಶಿವಾ; ಹೋದರೇನೋ.**

'ಊಡದ ಆವಿಂಗೆ ಉಣ್ಣದ ಕಱುವ ಬಿಟ್ಟಂತೆ' ಅಲ್ಲಿ ಸಾಮರಸ್ಯ ನೆಲೆಗೊಳ್ಳಲಾರದು.

ಸುಭದ್ರವಾದ ಸಮಾಜ ರಚನೆಗೆ ಅದರ ಆರ್ಥಿಕ ವ್ಯವಸ್ಥೆ ಸರಿಯಾಗಿರುವಂತೆ ನೋಡಿಕೊಳ್ಳುವುದು ಅವಶ್ಯ. ಹಾಗಾಗಬೇಕಾದರೆ ಪ್ರತಿಯೊಬ್ಬನೂ ಉದ್ಯೋಗ ನಿರತನಾಗಿ ಅದರಿಂದಲೇ ಅವನು ಉಪಜೀವನ ನಡೆಸಬೇಕು. ಆದರೆ ಈ ಉದ್ಯೋಗಗಳೇ ಅವರ ಜಾತಿಯ ಮೇಲು ಕೀಳನ್ನು ಸೂಚಿಸುವ ಅನಿಷ್ಟ ಪದ್ಧತಿಯನ್ನು ಬಸವಣ್ಣನವರು ಹೋಗಲಾಡಿಸಿ ಪ್ರತಿಯೊಬ್ಬನೂ ತನ್ನ ಉದ್ಯೋಗದಲ್ಲಿ ಶ್ರದ್ಧೆಯನ್ನೂ ಗೌರವವನ್ನೂ ತಾಳುವಂತೆ ಮಾಡಿದರು. ಗುಣಕರ್ಮಗಳ ನೆಲೆಯಿಂದ ವರ್ಣಗಳು ನಿರ್ಣೀತವಾಗಿದ್ದರೆ ವ್ಯಕ್ತಿಗಳಿಂದ ಉಂಟಾದ ಜಾತಿಗಳನ್ನು ಆಗ ಸ್ವಾರ್ಥಿಗಳು ತಮ್ಮ ಹಿತಕ್ಕೆ ನಿರ್ಮಿಸಿಕೊಂಡಿರಬೇಕು.

**ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,**
**ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.**

ಎನ್ನುವಲ್ಲಿ ಯಾವ ಕೆಲಸವೂ ತನ್ನಷ್ಟಕ್ಕೆ ಮೇಲುಕೀಳಲ್ಲ ಎನ್ನುವದನ್ನು ಸ್ಪಷ್ಟಪಡಿಸಿದ್ದಾರೆ. ದುಡಿಯದವನಿಗೆ ಜೀವಿಸುವ ಹಕ್ಕು ಇಲ್ಲ. ಸಮಾಜದಲ್ಲಿ ಕೆಲವರು

ಮೈ ಮುರಿದು ದುಡಿಯುವುದು ಉಳಿದವರು, ಅದರ ಫಲವನ್ನುಂಡು ಜೀವಿಸುವುದು ಸಲ್ಲದು. ಬಡವಬಲ್ಲಿದರೆನ್ನದೆ ಎಲ್ಲರೂ ದುಡಿದಾಗ ಸಮಾಜ ಸ್ವಯಂಪೂರ್ಣವಾಗುತ್ತದೆ. ಕಾಯಕದಲ್ಲಿ ನಿಷ್ಠೆಯುಳ್ಳವನಿಗೆ, ಅದೇ ಅವನ ಆಧ್ಯಾತ್ಮಿಕ ಸಾಧನೆಯಾಗಿ ಮುಕ್ತಿ ದೊರೆಯುತ್ತದೆಂದು 'ಕಾಯಕ'ಕ್ಕೆ ಹೊಸ ಅರ್ಥವನ್ನೂ, ಜೀವಕಳೆಯನ್ನೂ ತುಂಬಿದ ಬಸವಣ್ಣನವರು ಲೌಕಿಕ-ಆಧ್ಯಾತ್ಮಗಳನ್ನೂ ಒಂದುಗೂಡಿಸಿದರು. ತನ್ನ ಕೆಲಸವನ್ನು ನಿಷ್ಠೆಯಿಂದ, ಆತ್ಮಸಂತೋಷದಿಂದ, ಭಗವಂತನ ಆರಾಧನೆಯೆಂದೇ ಮಾಡಿದಾಗ ಅದರ ಹಿರಿಮೆ ಗೊತ್ತಾಗುತ್ತದೆ. ಕಾಯಕದಿಂದ ಬಂದ ಹಣವನ್ನು ಗುರು ಲಿಂಗ ಜಂಗಮ ಈ ತ್ರಿವಿಧ ದಾಸೋಹಕ್ಕೆ ವ್ಯಯಿಸಬೇಕು. ಅಂದರೆ ಗಳಿಸಿದ ಹಣವನ್ನೆಲ್ಲ ತನಗಾಗಿಯೇ ಇಟ್ಟುಕೊಳ್ಳದೆ ದಾಸೋಹಭಾವದಿಂದ ಸಮಾಜಕ್ಕೆ ಅರ್ಪಿಸಬೇಕು. ಇದರಿಂದ ವ್ಯಕ್ತಿ ಸಮಾಜದ ಸಮನ್ವಯವೂ ಸಾಧಿತವಾಯಿತು. 'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ' ಎಂದು ಕಾಯಕಕ್ಕೆ ಹೊರತಾದ ಅಲ್ಲಸಲ್ಲದ ರೀತಿಯಿಂದ ಬರುವ ಧನವನ್ನು ಬಸವಣ್ಣನವರು ತಿರಸ್ಕರಿಸಿದ್ದಾರೆ. 'ತನು ಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ' ಎಂದು ಅಂಥವರನ್ನು ಕೊಂಡಾಡುವಲ್ಲಿ ಸತ್ಯ ಶುದ್ಧ ಕಾಯಕದ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ಇದಕ್ಕೆ ಹೊಂದಿಕೊಂಡಂತೆಯೇ ವ್ಯಕ್ತಿ ಸ್ವಾತಂತ್ರ್ಯದ ಅತ್ಯಂತ ಸೂಕ್ಷ್ಮ ನೆಲೆಯಲ್ಲಿ ನಿಂತ ಬಸವಣ್ಣನವರು ಸ್ಥಾವರಲಿಂಗ ಪೂಜೆಯನ್ನು ನಿಷೇಧಿಸಿ ಧರ್ಮದ ಹೆಸರಿನಲ್ಲಿ, ದೇವಾಲಯಗಳ ರೂಪದಲ್ಲಿ ನಡೆಯುವ ದುರುಪಯೋಗವನ್ನು, ಶೋಷಣೆಯನ್ನು ತಡೆಹಿಡಿದರು. ದೇವಾಲಯ ಪ್ರವೇಶ ಸಾಮಾನ್ಯವಾಗಿ ಎಲ್ಲರಿಗೂ ಇಲ್ಲದಾಗ ಆ ಸಂಸ್ಥೆ ಸಂಪ್ರದಾಯಕ್ಕೆ ಕಟ್ಟುಬಿದ್ದಾಗ, ಹೆಚ್ಚಾಗಿ ಹಣವಂತರ ಅಧಿಕಾರಕ್ಕೆ ಅದು ಒಳಗಾಗಿರುವಾಗ ಬಸವಣ್ಣನವರ ಇಷ್ಟಲಿಂಗೋಪಾಸನೆ ಇನ್ನೂ ಹೆಚ್ಚಿನ ಅರ್ಥ ಒದಗಿಸಿತು.

**ಉಳ್ಳವರು ಶಿವಾಲಯವ ಮಾಡುವರು;**
**ನಾನೇನ ಮಾಡುವೆ? ಬಡವನಯ್ಯಾ**
**ಎನ್ನ ಕಾಲೇ ಕಂಭ, ದೇಹವೇ ದೇಗುಲ**
**ಸಿರ ಹೊನ್ನ ಕಳಸವಯ್ಯಾ**
**ಕೂಡಲಸಂಗಮದೇವ, ಕೇಳಯ್ಯ,**
**ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.** (ಬ.ಷ.ವ. ೮೨೦)

ಗುರು ನೀಡಿದ ಇಷ್ಟಲಿಂಗದಲ್ಲಿ ಕೈಯಲ್ಲೇ ಪರಮಾತ್ಮನನ್ನು ತಂದಿರಿಸಿ ಎಂಥ ಬಡವರಿಗೂ ಅವರವರ ಆತ್ಮಶಕ್ತಿಯ ವಿಕಾಶವನ್ನು ಸಾಧಿಸುವ ಸಹಜ ಸೌಲಭ್ಯವನ್ನು ಒದಗಿಸಿದರು. ಭಕ್ತನಿಗೂ ದೇವರಿಗೂ ನಡುವೆ ಬೇರೆಯವರ ಅವಶ್ಯಕತೆಯಿಲ್ಲ. ತಾನು ಸ್ವತಃ ಮಾಡಬೇಕಾದುದನ್ನು ಅವರಿಂದ ಮಾಡಿಸಬಹುದೆ?

**ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು**
**ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?**

ಎಂದು ಅವರು ತೀಕ್ಷ್ಣವಾಗಿಯೇ ಕೇಳುತ್ತಾರೆ. ಇದು ಪರಂಪರೆಯಿಂದ ಬಂದ ಪುರೋಹಿತ ಸಂಪ್ರದಾಯದ ವ್ಯವಸ್ಥೆಗೆ, ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆಗೆ, ದೇವಾಲಯಗಳ ದುರುಪಯೋಗಕ್ಕೆ ಕುಠಾರಪ್ರಾಯವಾಯಿತು, ಸಾಮಾಜಿಕ ಶಕ್ತಿಯಾಯಿತು. ವ್ಯಕ್ತಿಯ ಸರ್ವಾಂಗೀಣ ವಿಕಾಸಕ್ಕೆ ಕಾರಣವಾದ ಸ್ವಯಂಪೂರ್ಣ ಸಮಾಜವನ್ನು ನಿರ್ಮಿಸುವ ಶರಣರ ಸಾಧನೆಗೆ ಈ ವ್ಯಕ್ತಿ ಸ್ವಾತಂತ್ರ್ಯ ಭದ್ರವಾದ ಬುನಾದಿ ಹಾಕಿತು.

ದೀನರನ್ನು, ಜಾತಿಹೀನರನ್ನು, ಬಡವರನ್ನು ಕಂಡು ಮರುಕಗೊಳ್ಳುತ್ತಿದ್ದ ಬಸವಣ್ಣನವರು ಶ್ರೀಮಂತರ ಸ್ವಭಾವವನ್ನು ಚೆನ್ನಾಗಿ ಅರಿತವರಾಗಿದ್ದರು. "ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ' ಅಹಂಕಾರದಿಂದ ಅವರು ಕಣ್ಣನ್ನೇ ತೆರೆಯುವುದಿಲ್ಲ. ಆದರೆ 'ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರು!' ಆದರೆ ಭಕ್ತರ ಸಂಸ್ಕೃತಿಯೇ ಬೇರೆ. 'ಮನೆ ನೋಡಾ ಬಡವರು, ಮನ ನೋಡಾ ಘನ' ಅಂಥವರನ್ನು ಹೇಗೆ ನಡೆಸಿಕೊಳ್ಳಬೇಕೆಂಬ ಸಾಮಾಜಿಕ ರೀತಿ ನೀತಿಯನ್ನೂ ಅಹಂಕಾರಿಗಳು ಅರಿಯರು.

**'ಏನಿ ಬಂದಿರಿ ಹದುಳವಿದ್ದಿರೆ?' ಎಂದರೆ**
**ನಿಮ್ಮ ಮೈಸಿರಿ ಹಾರಿ ಹೋಹುದೇ?**
**ಕುಳ್ಳಿರೆಂದರೆ ನೆಲ ಕುಳಿ ಹೋಹುದೇ?**
**ಒಡನೆ ನುಡಿದರೆ ಶಿರ ಹೊಟ್ಟೆಯೊಡೆವುದೆ?**
**ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದೊಡೆ,**
**ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವನು.**

(ಬ.ಷ.ವ. ೨೪೧)

ಎಂದು ಕಟುವಾಗಿ ಕೇಳಿ, ಅಂಥವರ ಕಣ್ಣು ತೆರೆಯಿಸಿ ಮಾನವೀಯತೆಯ ಗುಣವನ್ನು ಬೆಳೆಸಿ, ಸಾಮಾಜಿಕ ಮೌಲ್ಯಗಳನ್ನು ಸಮುಚಿತವಾಗಿ ಬಿಂಬಿಸಿದ್ದಾರೆ.

**ಆನೆಯನೇಜಿಕೊಂಡು ಹೋದಿರೆ ನೀವು,**
**ಕುದುರೆಯನೇಜಿಕೊಂಡು ಹೋದಿರೆ ನೀವು,**
**ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ, ಅಣ್ಣಾ**
**ಸತ್ಯದ ನಿಲವನರಿಯದೆ ಹೋದಿರಲ್ಲಾ ॥**

(ಬ.ಷ.ವ. ೬೩೯)

ಹೀಗೆ ಐಶ್ವರ್ಯ ಮದದಿಂದ ಸದ್ಗುಣವನ್ನು ಬೆಳೆಸದೆ, ವಿಧಿಗೆ ಗುರಿಯಾಗಿ ಹೋದವರನ್ನು ಕಂಡು ಮರುಗಿದ್ದಾರೆ. ಬಸವಣ್ಣನವರು ಬಡವರ ಬಗೆಗೆ ತೋರಿದ ಅನುಕಂಪವನ್ನು, ಸಿರಿವಂತರ ಮನಸ್ಸನ್ನು ತಿದ್ದಿದ ಬಗೆಯನ್ನು ಇಂಥ ವಚನಗಳಲ್ಲಿ ಕಾಣಬಹುದು.

ಧರ್ಮದಲ್ಲಿ ಒಂದು ಮುಖ್ಯಭಾಗವಾದ ಸಮಾಜ ಹಿತಚಿಂತನೆಗೆ ನೀತಿಯೇ ನೆಲಗಟ್ಟು. ಆದುದರಿಂದ ಸದಾಚಾರ, ಸದ್ವರ್ತನೆಗಳಿಗೆ ಬಸವಣ್ಣನವರು ಒತ್ತುಕೊಟ್ಟು ಹೇಳಿದ್ದಾರೆ. ನಿತ್ಯ ಜೀವನದಲ್ಲಿ ಅವರು ಪಾಲಿಸಬೇಕಾದ ನಿಯಮಗಳನ್ನು ಸರಳವಾಗಿ, ಸುಲಭವಾಗಿ ಯಾವ ಅಧಿಕಾರದ ಸೋಂಕೂ ಇಲ್ಲದೆ ಅರ್ಥವಾಗುವಂತೆ, ಆಡಿದ ಮಾತು ವ್ಯರ್ಥವಾಗದಂತೆ ಆತ್ಮೀಯವಾಗಿ ಕಳಕಳಿಯಿಂದ ಒಡನುಡಿದಿದ್ದಾರೆ.

**ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ;**
**ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ;**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,**
**ಇದೇ ನಮ್ಮ ಕೂಡಲಸಂಗಮನೊಲಿಸುವ ಪರಿ** (ಬ.ಷ.ವ. ೬೩೯)

**ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ!**
**ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ!**
**ಆಚಾರವೇ ಸ್ವರ್ಗ, ಅನಾಚಾರವೇ ನರಕ**
**ಕೂಡಲಸಂಗಮದೇವಾ, ನೀವೇ ಪ್ರಮಾಣು.** (ಬ.ಷ.ವ. ೨೩೯)

**ದಯವಿಲ್ಲದ ಧರ್ಮವದೇವುದಯ್ಯಾ?**
**ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ**
**ದಯವೇ ಧರ್ಮದ ಮೂಲವಯ್ಯಾ,**
**ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ** (ಬ.ಷ.ವ. ೨೪೭)

**ಕಂಡ ಭಕ್ತರಿಗೆ ಕೈ ಮುಗಿವಾತನೆ ಭಕ್ತ;**
**ಮೃದು ವಚನಗಳೇ ಸಕಲ ಜಪಂಗಳಯ್ಯಾ,**
**ಮೃದು ವಚನಗಳೇ ಸಕಲ ತಪಂಗಳಯ್ಯಾ**
**ಸದುವಿನಯವೇ ಸದಾಶಿವನೊಲುಮೆಯಯ್ಯಾ**
**ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ. (ಬ.ಷ.ವ. ೨೪೪)**

**ತೊಱೆಯ ಮೀವಣ್ಣಗಳಿರಾ, ತೊಱೆಯ ಮೀವ ಸ್ವಾಮಿಗಳಿರಾ,**
**ತೊಱೆಯಿಂಭೋ, ತೊಱೆಯಿಂಭೋ**
**ಪರನಾರಿಯ ಸಂಗವ ತೊಱೆಯಿಂಬೋ!**
**ಪರಧನದಾಮಿಷವ ತೊಱೆಯಿಂಭೋ!**
**ಇವ ತೊಱೆಯದೆ ಹೋಗಿ ತೊಱೆಯ ಮಿಂದರೆ,**
**ಬಱುದೊಱೆಹೋಹುದು, ಕೂಡಲಸಂಗಮದೇವಾ. (ಬ.ಷ.ವ. ೬೪೪)**

ಇಂಥ ನೂರಾರು ವಚನಗಳಲ್ಲಿ ಮಿಡಿಯುವ ಆಪ್ತಸ್ವರ, ಪ್ರೇಮಪೂರಿತ ಹಿತವಚನ ಆತ್ಮೀಯ ಸಂಬೋಧನೆ ಕೇಳುಗರನ್ನು ತಾನಾಗಿಯೇ ಸೆಳೆದುಕೊಳ್ಳುತ್ತವೆ. 'ಆ ಮಾತುಗಳಲ್ಲಿ ಅಷ್ಟೊಂದು ಮಾಧುರ್ಯವಿದೆ, ಅನುಭವವಿದೆ, ಹಿತವಿದೆ, ಅವುಗಳಿಂದ ಆಕರ್ಷಿತನಾಗಿ ಅವರ ಪಾದದೆಸೆಯಲ್ಲಿ ಕುಳಿತು ಕೇಳೋಣವೆನ್ನಿಸುತ್ತದೆ'.

ಈ ಬಗೆಯಾಗಿ ನೀತಿಗಳನ್ನು ಆಚರಿಸಿ ಈ ಲೋಕದಲ್ಲಿ ಸರಿಯಾಗಿ ಬಾಳಿದವರಿಗೆ ಪರದಲ್ಲಿ ಸದ್ಗತಿಯುಂಟು. ಇಹಪರಗಳ ಸುಂದರ ಸಮನ್ವಯವೇ ಬಸವಣ್ಣನವರ ಘನವಾದ ಆಶಯ. ಅದಕ್ಕಾಗಿ ಇಲ್ಲಿಯ ಜೀವನವನ್ನು ಶುದ್ಧವಾಗಿ ಸುರುಚಿರವಾಗಿ ಬಾಳಬೇಕು. ಈ ಮಾನವಜನ್ಮವನ್ನು ನಮ್ಮ ಧ್ಯೇಯವನ್ನು ಈಡೇರಿಸಲು ಸಾರ್ಥಕವಾದ ಸಾಧನವನ್ನಾಗಿ ಮಾಡಿಕೊಳ್ಳಬೇಕು.

**ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ!**
**ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ,**
**ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲಸಂಗಮದೇವಾ.**

(ಬ.ಷ.ವ. ೧೨೫)

ಮರ್ತ್ಯಲೋಕವು ಭಗವಂತನ ಟಂಕಸಾಲೆ. ಇಲ್ಲಿ ಈ ಜೀವನಾಣ್ಯ ಸರಿಯಾದ ಮುದ್ರೆಯನ್ನು ಹೊಂದಿ ಝಣಝಣಿಸಿದರೆ ಎಲ್ಲಿ ಹೋದರೂ, ಪರಲೋಕದಲ್ಲೂ ಚಲಾವಣೆ ಪಡೆಯುತ್ತದೆ. ಇಹದ ಬಾಳಿನ ಶುಚಿಗೆ, ಶುದ್ಧಿಗೆ ಸಾರ್ಥಕತೆಗೆ ಬಸವಣ್ಣನವರು ನೀಡಿದ ಪಾವಿತ್ರ್ಯ ಮಹತ್ವಪೂರ್ಣವಾದುದು. 'ಸತ್ತು ಬೆರೆಸಿಹೆನೆಂದರೆ ಕಬ್ಬಿನ ತುದಿಯ

ಮೆಲಿದಂತೆ' ಎಂಬ ಇನ್ನೊಂದು ವಚನದಲ್ಲಿ ಕಬ್ಬು ತುದಿಗಿಂತ ಬುಡದ ಕಡೆ ಹೆಚ್ಚು ರಸಭರಿತವಾಗಿರುವುದನ್ನು ಸೂಚಿಸಿರುವುದು ಅರ್ಥಪೂರ್ಣವಾಗಿದೆ.

ಹೀಗೆ ಬಸವಣ್ಣನವರು ನವಸಮಾಜದ ದರ್ಶನವನ್ನೂ ಪಡೆದವರಾಗಿದ್ದು ವ್ಯಕ್ತಿಯ ಮತ್ತು ಸಮಾಜದ ಜೀವನದಲ್ಲಿ ಸಮನ್ವಯವನ್ನೂ ಪರಿಪೂರ್ಣತೆಯನ್ನೂ ಸಾಧಿಸುವ ಮಾರ್ಗವನ್ನು ರೂಪಿಸಿದರು. ಆದರ್ಶವನ್ನು ವ್ಯಾವಹಾರಿಕ ಸತ್ಯವಾಗಿ ಮಾರ್ಪಡಿಸಿ ತೋರಿಸಿದುದೇ ಅವರ ಹಿರಿಮೆ. ಸ್ವತಂತ್ರವಾದ ವಿಚಾರದೃಷ್ಟಿಯಿಂದ ಜೀವನದ ಗುರಿಯನ್ನು ಕಂಡುಕೊಂಡು, ಅದನ್ನು ಈಡೇರಿಸುವ ದಾರಿಯಲ್ಲಿ ಬರುವ ಕಷ್ಟನಿಷ್ಠುರಗಳನ್ನು ಧೈರ್ಯದಿಂದ ಎದುರಿಸಿದ ವೀರವ್ರತಾಚಾರಿ ಅವರು.

**ನ್ಯಾಯನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ**
**ಲೋಕವಿರೋಧಿ, ಶರಣನಾರಿಗಂಜುವನಲ್ಲ**
**ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ ॥** (ಬ.ಷ.ವ. ೭೫೩)

ಧರ್ಮದಲ್ಲಿ, ದಯೆಯಲ್ಲಿ, ಸಮಾಜ ಸುಧಾರಣೆಯ ಕಾರ್ಯದಲ್ಲಿ ಅವರು 'ವೀರ'ದ ನಿಜವಾದ ಬೆಲೆಯನ್ನು ಕಂಡುಕೊಂಡರು. 'ಬಸವಯುಗಕ್ಕೆ ಹಿಂದಿನದಾದ ಪಂಪಯುಗದಲ್ಲಿ ಮಾನವನಿಗೆ ಬೆಲೆ ಬರಲು 'ವೀರ' ಪ್ರಶಸ್ತಿಯ ಆವಶ್ಯಕತೆಯಿತ್ತು. ಆದರೆ ಬಸವಯುಗದಲ್ಲಿ ಧರ್ಮ ದಯಾರ್ದ್ರ ಧರ್ಮ ಪ್ರಶಸ್ತಿಯು ಅವಧಾರಣೆಯನ್ನು ಪಡೆಯಿತು. ಅಂದ ಮಾತ್ರಕ್ಕೆ ಬಸವಯುಗದ 'ಧರ್ಮವು' ಅಂಜುಬುರುಕುತನದಿಂದ ಕೂಡಿದ ಹೇಡಿಗಳ ಹೀನತನವಾಗಿರಲಿಲ್ಲ. 'ವೀರ'ವೆಂಬುದು ದ್ವೇಷ ಆಸೂಯೆ ಗಳಿಗಾಗಿಯಲ್ಲದೆ ಪ್ರೇಮಕ್ಕಾಗಿ, ಮತ್ತು ಸಮಾಜದ ಸರ್ವಾಂಗೀಣ ಸುಂದರ ಸಂವರ್ಧನೆಗಾಗಿ ಬಳಕೆಯಾಗಬೇಕೆಂಬುದರ ಅರಿವೂ ಬಸವಣ್ಣನವರಿಗಿದ್ದಿತು. ಆದುದರಿಂದಲೇ ಅವರ ವೀರವು ಸಾತ್ವಿಕವಾದದ್ದು ಮತ್ತು ದೃಢವಾದದ್ದು.

ತಮ್ಮ ಕಾಲದ ನೂರಾರು ಶಿವಶರಣರಿಂದ ಬಸವಣ್ಣನವರು ಸ್ಫೂರ್ತಿಯನ್ನೂ, ಉತ್ಸಾಹವನ್ನೂ, ಮಾರ್ಗದರ್ಶನವನ್ನೂ ಪಡೆದದ್ದು ನಿಜ. ಹನ್ನೆರಡನೆಯ ಶತಮಾನದಲ್ಲಿ ನಡೆದ ಸಾಮೂಹಿಕ ಕ್ರಾಂತಿಯ ಯಶಸ್ಸು ಅವರೆಲ್ಲರಿಗೂ ಸಲ್ಲಬೇಕಾದದ್ದು. ಆದರೆ ಅವರೆಲ್ಲರಿಗೂ ಕೇಂದ್ರ ವ್ಯಕ್ತಿಯಾಗಿದ್ದ ಬಸವಣ್ಣನವರ ಕರ್ತವ್ಯ ಶಕ್ತಿ ಪ್ರಜ್ಞೆ ಮತ್ತು ಬಹುಮುಖ ವ್ಯಕ್ತಿತ್ವಗಳ ದೈವಿಕ ಸಾಧನೆ, ಅದಕ್ಕೆ ಮುಖ್ಯವಾದ ಪ್ರೇರಕ ಶಕ್ತಿಯಾಗಿದ್ದಿತು. 'ಅವರ ಸ್ವಭಾವದ ಪರಿಶೀಲನೆಯನ್ನು ಮಾಡಿದರೆ ಅವರಲ್ಲಿ ಒಬ್ಬ ಶ್ರೇಷ್ಠ ನಾಯಕನ ಎಲ್ಲ ಗುಣಗಳೂ ಸಮನ್ವಿತವಾಗಿರುವುದು ಕಂಡುಬರುತ್ತದೆ. ನಿಃಸ್ವಾರ್ಥ, ವಿನಯ, ತ್ಯಾಗ, ಸದುದ್ದೇಶ, ಮೃದುತ್ವ ಮತ್ತು ಕಠೋರತೆ, ಭಾವಾವೇಶ ಮತ್ತು ವಾಕ್ಶಕ್ತಿ, ನಿರ್ಭೀತಿ, ಬಿಚ್ಚುಮನಸ್ಸು, ಸೇವಾಮನೋಧರ್ಮ ಇವೆಲ್ಲವೂ ಶ್ರೇಷ್ಠ ನಾಯಕನ

ಗುಣಗಳು'. 'ಬಸವಣ್ಣ'ನೆಂಬ ಜ್ಯೋತಿಯಲ್ಲಿ ತೊಳಗಿ ಬೆಳಗಿದ್ದು, ಶಿವನ ಪ್ರತಾಪ, ಎಂದು ಶರಣರೆಲ್ಲರಿಗೂ ಗುರುವೆನಿಸಿದ್ದ ಅಲ್ಲಮಪ್ರಭುಗಳೇ ಬಸವಣ್ಣನವರ ಮಹಿಮಾತಿಶಯವನ್ನು ಕೊಂಡಾಡಿರುವದರಲ್ಲಿ ಅತಿಶಯೋಕಿಯಿಲ್ಲ.

ವಿಶ್ವಶಾಂತಿಯ ಮೂಲತತ್ತ್ವಗಳನ್ನೂ, ವಿಶ್ವಧರ್ಮದ ಮುಖ್ಯ ಲಕ್ಷಣಗಳನ್ನೂ ಬಸವಣ್ಣನವರ ಬಾಳಿನಲ್ಲಿ, ಬೋಧೆಯಲ್ಲಿ, ಬರೆಹದಲ್ಲಿ, ಸ್ಪಷ್ಟವಾಗಿ ಗುರುತಿಸಬಹುದು. 'ಸಕಲ ಜೀವಾತ್ಮರಿಗೆ ಲೇಸ ಬಯಸಿ' ಮನುಷ್ಯ ಕುಲ ಒಂದಾಗಿ ಬಾಳಬೇಕೆಂಬುದೇ ಅವರ ಹಂಬಲ. 'ಕಾಗೆ ಕೋಳಿಗಳಿಗಿಂತ ಕರಕಷ್ಟ'ವಾಗದೆ 'ತನ್ನರಿವೇ ತನಗೆ ಗುರು'ವಾಗಿ ಸಫಲವಾದ ತುಂಬು ಜೀವನ ಆತನದಾಗಬೇಕೆಂಬುದೇ ಅವರ ರಚನೆಗಳಲ್ಲಿ ದೊರೆಯುವ ಧ್ವನಿಯಾಗಿದೆ. ವೈಯಕ್ತಿಕವಾದ ಧ್ಯಾನ, ಪೂಜೆ ಆರಾಧನೆಗಳು ಎಷ್ಟು ಮುಖ್ಯವೋ, ಜನತಾ ಸಂಪರ್ಕವೂ ಜನಹಿತ ಸಾಧನೆಯೂ ಅವರಿಗೆ ಅಷ್ಟೇ ಮುಖ್ಯವಾಗಿದ್ದಿತು. 'ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ. ಗಣ ತಿಂತಿಣಿಯೊಳಗಿರಿಸೆನ್ನನು ಲಿಂಗವೇ', 'ಇವನಾರವ, ಇವನಾರವ, ಇವನಾರವ? ಎಂದೆನಿಸದಿರಯ್ಯಾ. ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ' ಎಂಬುದೇ ಹೃದಯದ ಕೋರಿಕೆಯಾಗಿದ್ದಿತು. ಶರಣರನ್ನೆಲ್ಲ ಕೂಡಲಸಂಗಮನೆಂದೇ ತಿಳಿಯುತ್ತ ಅವರ ಸೇವೆಯಲ್ಲಿಯೇ ಮುಕ್ತಸುಖವನ್ನು ಅನುಭವಿಸುತ್ತ, ಮತ್ತಾವ ಪದವಿಯನ್ನೂ ಬಯಸದೆ, 'ಸದ್ಭಕ್ತರ ಪಾದವನ್ನರಿದಿಪ್ಪುದೇ ಮಹಾಪದವಿ'ಯೆಂದು ಭಾವಿಸಿ ಭೂಲೋಕವನ್ನೇ ಕೈಲಾಸಕ್ಕಿಂತ ಹೆಚ್ಚೆಂದು ಭಾವಿಸಿದರು.

**ಬಸವ ಬಾರೈ, ಮರ್ತ್ಯಲೋಕದೊಳಗೆ ಭಕ್ತರುಂಟೆ? ಹೇಳಯ್ಯಾ.**
**ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ!**
**ನಾನೊಬ್ಬನೇ ಭಕ್ತನು, ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ**
**ಜಂಗಮ ಲಿಂಗ, ನೀನೇ ಅಯ್ಯಾ! ಕೂಡಲಸಂಗಮದೇವಾ.**

(ಬ.ಷ.ವ. ೮೯೨)

ಬಸವಣ್ಣನವರ ತಾತ್ವಿಕ, ಆಧ್ಯಾತ್ಮಿಕ ವಿಚಾರಗಳು ಅವರ ಎಲ್ಲ ವಚನಗಳಲ್ಲಿಯೂ ಸಾಮಾನ್ಯವಾಗಿ ಆಯಾ ವಸ್ತುವಿನಲ್ಲಿಯೇ ಮೂಡಿ ಬಂದಿವೆ. ಹೀಗಿರುವಾಗ ವೀರಶೈವ ಮತ ಸಿದ್ಧಾಂತಕ್ಕೆ ಬಸವಣ್ಣನವರ ವಚನಗಳ ಕೊಡುಗೆಯನ್ನು ಕುರಿತು ಪ್ರತ್ಯೇಕವಾಗಿ ನಿರೂಪಿಸುವ ಅಗತ್ಯವಿಲ್ಲವೆಂದು ತೋರುತ್ತದೆ. ಸಾಮಾನ್ಯ ಜನತೆಯ ಉದ್ಧಾರ ಅವರ ಮುಖ್ಯ ಗುರಿಯಾಗಿದ್ದಿತಲ್ಲದೆ ಸಿದ್ಧಾಂತ ಪ್ರತಿಪಾದನೆ ಅಲ್ಲವೆಂಬುದನ್ನು ಇಲ್ಲಿ ನೆನಪಿಡಬೇಕು. ಆದರೂ ಬೇರೆ ಬೇರೆ ಸಂದರ್ಭಗಳಲ್ಲಿ ಮೇಲೆ ಉದಾಹರಿಸಿದ ಅವರ ವಚನಗಳಲ್ಲಿ ವೀರಶೈವ ಧರ್ಮದ

ಸ್ವರೂಪವನ್ನು ಕಂಡುಕೊಳ್ಳಬಹುದಾಗಿದೆ. ಆ ಧರ್ಮದ ಆಧಾರಭೂತವಾದ ತತ್ವಗಳನ್ನು ಶರಣರು ಬೌದ್ಧಿಕವಾಗಿ ಚರ್ಚಿಸಿ, ಅದರ ಸಿದ್ಧಾಂತವನ್ನು ರೂಪಿಸಿ ತೃಪ್ತರಾಗದೆ ಅದರ ಪ್ರೇರಣೆಯಿಂದ ತಮ್ಮದೇ ಆದ ವಿಚಾರಧಾರೆಯನ್ನು ಸಮಾಜಕ್ಕೆ ಎರೆದು ವಚನಗಳಲ್ಲಿ ಅದಕ್ಕೆ ಅಭಿವ್ಯಕ್ತಿ ನೀಡಿದರು. ಷಟ್ಸ್ಥಲ (ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ) ಅಷ್ಟಾವರಣ (ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ) ಪಂಚಾಚಾರ (ಲಿಂಗಾಚಾರ, ಶಿವಾಚಾರ, ಸದಾಚಾರ, ಭೃತ್ಯಾಚಾರ, ಗಣಾಚಾರ) – ಇವು ವೀರಶೈವ ಧರ್ಮದ ಮುಖ್ಯ ಅಂಗಗಳು. ಚೆನ್ನಬಸವಣ್ಣ ಹಾಗೂ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಈ ಸಿದ್ಧಾಂತವನ್ನು ನಿರ್ಣಯಿಸಿ ನಿಶ್ಚಿತಗೊಳಿಸಿದವರಲ್ಲಿ ಮುಖ್ಯರು. ಮಗ್ಗೆಯ ಮಾಯಿದೇವರು ಬಸವಣ್ಣನವರನ್ನು 'ವೀರಶೈವ ನಿರ್ಣಯ ಪರಮಾವತಾರ' ಎಂದು ಕರೆದಿದ್ದರೂ, ಬಸವಣ್ಣನವರು 'ಷಡುಸ್ಥಲದ ಮೂರ್ತಿಯಾಗಿ ಬಂದೆಯಲ್ಲಾ ಚೆನ್ನಬಸವಣ್ಣಾ' ಎಂದು ಚೆನ್ನಬಸವಣ್ಣನಿಗೆ ಆ ಗೌರವವನ್ನು ನೀಡಿರುವುದು ಯಥೋಚಿತವಾಗಿದೆ.

ಅನುಭವ ಮಂಟಪದಲ್ಲಿ ಒಂದು ನಿರ್ದಿಷ್ಟ ವಿಚಾರವನ್ನು ಕುರಿತು ಚರ್ಚೆ ನಡೆದಾಗ ಬಹುಶಃ ಆ ವಿಷಯಕ್ಕೆ ಸಂಬಂಧಪಟ್ಟಂತೆ ಸ್ಥಲಾನುಸಾರವಾಗಿ ಈ ವಚನಗಳನ್ನು ಹೊಂದಿಸಿರಬಹುದಾದರೂ ಉಳಿದ ಸಂದರ್ಭಗಳಲ್ಲಿಯ ಶರಣರ ವೈಯಕ್ತಿಕ ಅನಿಸಿಕೆಗಳು, ಸಹಜಸ್ಫೂರ್ತವಾದ ಭಾವಾಭಿವ್ಯಕ್ತಿಗಳು ಬಿಡಿಬಿಡಿಯಾಗಿ ಮುಕ್ತಕಗಳಾಗಿಯೇ ಮೂಡಿರಬಹುದೆಂದು ತೋರುತ್ತದೆ. 'ಹಲವರು ಬಸವಣ್ಣನವರ ಇಲ್ಲವೆ ಇನ್ನಿತರ ವಚನಕಾರರ ವಚನಗಳು ಬಿಡಿಬಿಡಿಯಾಗಿಯೇ ರಚಿತವಾದವು; ಅವುಗಳಿಗೆಲ್ಲ ಪರಸ್ಪರ ಸಂಬಂಧವನ್ನು ಸಂಕಲ್ಪಿಸಿ, ಸ್ಥಳಕಟ್ಟುಗಳನ್ನು ಬಹುಕಾಲದ ತರುವಾಯ ಬೇರೆಯವರು ಮಾಡಿರಬೇಕು ಎಂದು ಊಹಿಸುತ್ತಾರೆ. ಆದರೆ ಈ ಊಹೆಗೆ ಬಲವತ್ತರವಾದ ಆಧಾರಗಳು ಇದ್ದಂತೆ ನಮಗೆ ತೋರುವುದಿಲ್ಲ' ಎಂದಿರುವ ಶಿ.ಶಿ. ಬಸವನಾಳರು ಈ ವಚನಗಳು 'ಷಟ್‌ಸ್ಥಳದ ವಚನಗಳು' ಎಂದೇ ತಾಳೆವೋಲೆಯ ಮಾತೃಕೆಗಳಲ್ಲಿ ದೊರೆಯುತ್ತಿರುವುದನ್ನು, ಕೈ ಬರೆಹದ ಪ್ರತಿಗಳಲ್ಲೆಲ್ಲ ಈ ವಚನಗಳನ್ನು ಷಟ್‌ಸ್ಥಳಾನುಸಾರವಾಗಿಯೇ ವಿಭಾಗ ಮಾಡಿದುದು ಕಂಡುಬರುತ್ತಿರುವದನ್ನೂ ತಿಳಿಸಿದ್ದಾರೆ.

'ಎತ್ತೆತ್ತ ನೋಡಿದರತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ' ಎಂದು ಸೃಷ್ಟಿಕರ್ತನ ಸ್ವರೂಪವನ್ನೂ ವ್ಯಾಪ್ತಿಯನ್ನೂ ಅನುಭಾವಿಯ ನಿಲುವಿನಿಂದ ಬಸವಣ್ಣನವರು ಕಂಡು, 'ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ, ದೇವನೊಬ್ಬನೇ ಕಾಣಿರೋ' ಎಂದು ಸಾರಿದ್ದಾರೆ. ಅಖಂಡ

ಬ್ರಹ್ಮಾಂಡದ ದಿವ್ಯಶಕ್ತಿಯ ಸಂಕೇತವಾಗಿ ಇಷ್ಟಲಿಂಗ ರೂಪುಗೊಂಡಿರುವುದನ್ನು ಅವರ ಒಂದು ವಚನ ಸುಂದರವಾಗಿ ನಿರೂಪಿಸುತ್ತದೆ.

**ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ;**
**ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ!**
**ಬ್ರಹ್ಮಾಂಡದಿಂದತತ್ತ ನಿಮ್ಮ ಶ್ರೀ ಮಕುಟ**
**ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ, ಕೂಡಲಸಂಗಮದೇವಯ್ಯಾ**
**ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ!!** (ಬ.ಷ.ವ. ೭೪೩)

ಹೀಗೆ ಅದು ಸರ್ವರಲ್ಲಿಯೂ ಅಡಗಿರುವ ಮಹಾಚೈತನ್ಯದ ರೂಪು. ಅದನ್ನು ಬಸವಣ್ಣನವರು ಲೋಕೋದ್ಧಾರದ ಕ್ರಾಂತಿಕಾರಕವಾದ ಕಾರ್ಯಕ್ಷೇತ್ರಕ್ಕೆ ಕಾರಣ ಶಕ್ತಿಯಾಗಿ ಅಳವಡಿಸಿಕೊಂಡಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಈ ಇಷ್ಟಲಿಂಗ ಉಪಾಸನೆಯಲ್ಲಿ ಸಗುಣದಿಂದ ನಿರ್ಗುಣಕ್ಕೆ, ಸಾಕಾರವಿಡಿದು ನಿರಾಕಾರಕ್ಕೇರುವ ಸಮನ್ವಯ ಮಾರ್ಗ ಒಡಮೂಡಿದೆ. ಅವರ ಲಿಂಗಭಕ್ತಿಗೆ ಗುರು ಮತ್ತು ಜಂಗಮಶಕ್ತಿ ಅವಲಂಬನೆಯಾದವು. 'ಗುರುವಚನವಿಲ್ಲದೆ ಲಿಂಗವೆನಿಸದು, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು' ಇಂಥ ಮಾತುಗಳಲ್ಲಿ ತ್ರಿವಿಧ ದಾಸೋಹದ ರಹಸ್ಯವನ್ನು ಅವರು ವ್ಯಕ್ತಪಡಿಸಿದ್ದಾರೆ. ಅಂಗನೂ ಕೊನೆಯಲ್ಲಿ ಲಿಂಗಸ್ವರೂಪನಾಗಿ ಲಿಂಗದಲ್ಲಿ ಸಮರಸವಾಗಿ ಪರಿಣಮಿಸುವನೆಂಬ ಹಿನ್ನೆಲೆಯಲ್ಲಿ ಮೋಕ್ಷದ ನಿಲುವನ್ನು ಬಸವಣ್ಣನವರು ನಿರೂಪಿಸಿದ್ದಾರೆ.

**ಬಯಲ ರೂಪ ಮಾಡಬಲ್ಲಾತನೇ ಶರಣನು;**
**ಆ ರೂಪ ಬಯಲ ಮಾಡಬಲ್ಲಾತನೇ ಲಿಂಗಾನುಭಾವಿ,**
**ಬಯಲ ರೂಪ ಮಾಡಲರಿಯದಿದ್ದರೆ ಎಂತು ಶರಣನೆಂಬೆ?**
**ಆ ರೂಪ ಬಯಲ ಮಾಡಲರಿಯದಿದ್ದರೆ ಎಂತು ಲಿಂಗಾನುಭಾವಿಯೆಂಬೆ?**
**ಈ ಉಭಯವೊಂದಾದರೆ ನಿಮ್ಮಲ್ಲಿ ತೆರಹುಂಟೆ,**
**ಕೂಡಲಸಂಗಮದೇವಾ?** (ಬ.ಷ.ವ. ೯೨೨)

**ಆತ್ಮನು ಅಡಗುವುದಕ್ಕೆ ಆ ಪರವಸ್ತುವೇ ಆಶ್ರಯ**
**ಸಮಸ್ತ ಕತ್ತಲೆಯ ಮಸಕ ಕಳೆದಿಪ್ಪ ಇರವ ನೋಡ!**
**ಬೆಳಗಿಂಗೆ ಬೆಳಗು ಸಿಂಹಾಸನವಾಗಿ,**
**ಬೆಳಗು ಬೆಳಗ ಕೂಡಿದ ಕೂಟವ**
**ಕೂಡಲಸಂಗಯ್ಯ ತಾನೇ ಬಲ್ಲ.** (ಬ.ಷ.ವ. ೯೫೭)

ಹೀಗೆ ಉಭಯ ಒಂದಾಗಿ ಬೆರೆಯಬೇಕು, ಬೆಳಗು ಬೆಳಗನ್ನು ಕೂಡಿದಂತೆ ಆಗಬೇಕೆಂಬುದೇ ಬಸವಣ್ಣನವರು ಸೂಚಿಸಿದ ಮೋಕ್ಷದ ಮೂಲಸೂತ್ರ, ಇಲ್ಲಿಯೂ

ಶಾಸ್ತ್ರೀಯ ಪರಿಭಾವನೆಗಿಂತ ಅಂತರಂಗದ ಅನುಭವಕ್ಕೆ ಅವರು ಪ್ರಾಧಾನ್ಯ ನೀಡಿದ್ದಾರೆ. 'ಏನೆಂಬೆನೇನೆಂಬೆ ಎರಡೊಂದಾದುದ? ಏನೆಂಬೆನೇನೆಂಬೆನವಿರಳ ಘನವ!' 'ಘನ ಗಂಭೀರ ಮಹಾಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯ' ಎಂಬಿವೇ ಮೊದಲಾದ ನುಡಿಗಳಲ್ಲಿ ಅದರ ಅರ್ಥವ್ಯಾಪ್ತಿಯನ್ನರಿಯಬಹುದು. ಈ ಕಲ್ಪನೆ ಶಕ್ತಿ ವಿಶಿಷ್ಟಾದ್ವೈತ ಅಥವಾ ಶಿವಾದ್ವೈತ ಸಿದ್ಧಾಂತದ ಹಿನ್ನೆಲೆಗೆ ಅನುಗುಣವಾಗಿಯೇ ಇದೆ. ಆದರೂ ಇದು ಅನುಭಾವಪೂರ್ವಕವಾದುದೆಂಬುದನ್ನು ಗಮನಿಸಬೇಕು. ತನ್ನ ವ್ಯಕ್ತಿತ್ವವನ್ನು ಪರಿಪೂರ್ಣ ಶೂನ್ಯದಲ್ಲಿ ವಿಲೀನಗೊಳಿಸಿ ಅದರಲ್ಲಿ ಸಮರಸವಾಗುವುದು ಎಂಬ ಅರ್ಥವನ್ನು ಶರಣರ 'ಬಯಲು' ಶಬ್ದ ಧ್ವನಿಸುತ್ತದೆ. ಬೌದ್ಧರ 'ನಿರ್ವಾಣ'ಕ್ಕೂ ಶರಣರ 'ಬಯಲಿ'ಗೂ ಇರುವ ವ್ಯತ್ಯಾಸವೇ ಇದು. 'ನಿರ್ವಾಣವು' ಆಶೆ ದ್ವೇಷ ಮೋಹಗಳನ್ನೆಲ್ಲಾ ನಿರಸನಗೊಳಿಸಿದ ನಂತರ ಉಳಿಯುವ ಅಭಾವ ಸ್ಥಿತಿ, ಆದರೆ ಬಯಲು ಅವನ್ನೆಲ್ಲಾ ನಿರಸನಗೊಳಿಸಿದ ನಂತರ ವಿಕಾಸಗೊಂಡ ಆತ್ಮವು ವಿಶ್ವಾತ್ಮನೊಡನೆ ಸಮರಸಗೊಳ್ಳುವ ಪರಿಪೂರ್ಣ ಸ್ಥಿತಿ. ನಿರ್ವಾಣದಲ್ಲಿ ವ್ಯಕ್ತಿ ಏನೂ ಇಲ್ಲದವನಾಗುತ್ತಾನೆ. ಆದರೆ ಬಯಲು ಎಲ್ಲವೂ ತಾನೇ ಆಗಿ ಪರಿಣಮಿಸುವ ನಿಲುವು.

'ಆಧ್ಯಾತ್ಮಿಕ ಅನುಭವದ ವಿಕಾಸವೇ ಷಟ್‌ಸ್ಥಲಕ್ಕೆ ತಳಹದಿ. ಶಿವಾಗಮಗಳ ಕಾಲದಿಂದ ಇಂದಿನವರೆಗೂ ಷಟ್‌ಸ್ಥಲದ ಬಗೆಗೆ, ಅದರ ಅನುಸಂಧಾನದ ಬಗೆಗೆ ವಿವೇಚನೆ ನಡೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಅನುಭಾವ ಮಾರ್ಗವಾಗಿ ಅದು ಶಿವಾನುಭವದ ರಹಸ್ಯವನ್ನು ಮಾರ್ಮಿಕವಾಗಿ ಭೇದಿಸುತ್ತದೆ; ಬೋಧಿಸುತ್ತದೆ. ಶಿವಯೋಗದ ನೆಲೆಯನ್ನು ನಿಲುವನ್ನು ತೋರಿಸುತ್ತದೆ. ಸಿದ್ಧಾಂತವಾಗಿ ಜೀವ, ಜಗತ್ತು, ಈಶ್ವರ ಇವುಗಳ ಪರಸ್ಪರ ಸಂಬಂಧವನ್ನು ತನ್ನದೇ ಆದ ಸ್ವತಂತ್ರ ವಿಚಾರ ಸರಣಿಯಿಂದ ವಿವರಿಸುತ್ತದೆ. ತಾತ್ವಿಕ ಸಿದ್ಧಾಂತ ಮತ್ತು ಆಚರಣೆ ಇದರಲ್ಲಿ ಸಮನ್ವಯಗೊಳ್ಳುತ್ತದೆ. ಭಕ್ತಸ್ಥಲದ ಮೊದಲನೆಯ ಹಂತ ಪಿಂಡಸ್ಥಲ. ಅಲ್ಲಿ ಶಿವತತ್ವ ಸುಪ್ತವಾಗಿ ಅಡಗಿರುವುದನ್ನು ಬಸವಣ್ಣನವರು ಸುಂದರವಾದ ಸಾದೃಶ್ಯದೊಡನೆ ಸೂಚಿಸಿದ್ದಾರೆ.

**ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು;**
**ಸಸಿಯೊಳಗಣ ರಸದ ರುಚಿಯಂತಿದ್ದಿತ್ತು.**
**ನನೆಯೊಳಗಣ ಪರಿಮಳದಂತಿದ್ದಿತ್ತು,**
**ಕೂಡಲಸಂಗಮದೇವಾ ನಿಮ್ಮ ನಿಲವು ಕನ್ಯೆಯ ಸ್ನೇಹದಂತಿದ್ದಿತ್ತು.** (ಬ.ಷ.ವ. ೧)

ತಾನು ಪಡೆದುದೆಲ್ಲವನ್ನೂ ಲಿಂಗಕ್ಕೆ ಅರ್ಪಿಸಿಕೊಳ್ಳುವುದು ಪ್ರಸಾದತತ್ವ, ತನ್ನನ್ನೇ ಸಂಪೂರ್ಣವಾಗಿ ಲಿಂಗಕ್ಕೆ ಅರ್ಪಿಸಿಕೊಳ್ಳುವದು ಇನ್ನೂ ಮುಂದಿನ ಮೆಟ್ಟಿಲು. 'ಪ್ರಾಣವನ್ನು ಬೀಸರವೋಗದೆ ಮೀಸಲಾಗಿ ಅರ್ಪಿಸಬಲ್ಲಡೆ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ'. 'ಶರಣ'ನಿಗೆ ತನಗಾಗಿ ಮಾಡಿಕೊಳ್ಳಬೇಕಾದುದೇನೂ ಉಳಿದಿಲ್ಲ. ಸಮಾಜದ ಸೇವಕನಾಗಿ ಆತ ದುಡಿಯಬೇಕು, ಹಮ್ಮಿನ, ಸೊಮ್ಮಿನ ಸಂಬಂಧ ಬಿಟ್ಟು ಕಿಂಕಿಲ ಕಿಂಕಿಲನಾಗಿರಬೇಕು'. ಆತನ ಕ್ರಿಯೆಯೆಲ್ಲವೂ ಸಮಾಜದ ಒಳಿತಿಗಾಗಿ ಎಂಬುದು ಆಧ್ಯಾತ್ಮಿಕ ದರ್ಶನಕ್ಕೆ ಬಸವಣ್ಣನವರು ನೀಡಿದ ವಿಶೇಷ ಕೊಡುಗೆಯಾಗಿದೆ.

ವ್ಯಕ್ತಿತ್ವದ ಪೂರ್ಣವಿಕಾಸ ಶಿವಯೋಗದ ಗುರಿ. ಆಚಾರ-ವಿಚಾರಗಳೆರಡಕ್ಕೂ ಶಿವಯೋಗದಲ್ಲಿ ಪ್ರಮುಖ ಸ್ಥಾನವೆಂಬುದನ್ನು, ಆ ಮಾರ್ಗದ ಬೆಳವಣಿಗೆಯನ್ನು ಮುಂದಿನ ವಚನ ಅರ್ಥಪೂರ್ಣವಾಗಿ ಪ್ರತಿಪಾದಿಸುತ್ತದೆ.

**ಭಕ್ತಿ ಎಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ**
**ಲಿಂಗವೆಂಬ ಎಲೆಯಾಯಿತ್ತು.**
**ಲಿಂಗವೆಂಬ ಎಲೆಯ ಮೇಲೆ**
**ವಿಚಾರವೆಂಬ ಹೂವಾಯಿತ್ತು.**
**ಆಚಾರವೆಂಬ ಕಾಯಾಯಿತ್ತು**
**ನಿಷ್ಪತ್ತಿಯೆಂಬ ಹಣ್ಣಾಯಿತ್ತು.**
**ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ**
**ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.** (ಬ.ಷ.ವ. ೫೨೭)

ಇಷ್ಟಲಿಂಗವನ್ನು ಕೇಂದ್ರವಾಗಿಟ್ಟುಕೊಂಡು ಏಕಾಗ್ರತೆಯ ಧ್ಯಾನಧಾರಣಾದಿಗಳ ಅವರ ಅನುಭವ ಹೀಗಿದೆ.

**ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುಟಿದು**
**ತುಟಿ ಮಿಡುಕದೆ ಅಟ್ಟೆಯಾಡಿತ್ತಲ್ಲಾ!**
**ಬಿಟ್ಟ ಕಣ್ಣು ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ**
**ಕಟ್ಟು ಗುಡಿಯ ಕೂಡಲಸಂಗಮದೇವ ಹಿಡಿವಡೆದ!** (ಬ.ಷ.ವ. ೮೧೪)

ಅಷ್ಟಾವರಣಗಳು ಕೇವಲ ಬಹಿರಂಗ ಸಾಧನಗಳಾಗಿರದೆ ಒಳಗಿನ ಅರಿವು ಹೊರರೂಪವನ್ನು ತಾಳಿರುವ ಸಂಕೇತಗಳು. ವೀರಶೈವ ಧರ್ಮದಲ್ಲಿ ಗುರುವೇ ಎಲ್ಲ ಆಧ್ಯಾತ್ಮಿಕ ಸಾಧನೆಗೂ ಮೂಲ.

**ಮಡಕೆಯ ಮಾಡುವರೆ ಮಣ್ಣೇ ಮೊದಲು;**
**ತೊಡುಗೆಯ ಮಾಡುವರೆ ಹೊನ್ನೇ ಮೊದಲು;**
**ಶಿವಪಥವನರಿವಡೆ ಗುರುಪಥವೇ ಮೊದಲು.** (ಬ.ಷ.ವ. ೭೦)

ಎನ್ನುತ್ತಾರೆ ಬಸವಣ್ಣನವರು. ಲಿಂಗದೀಕ್ಷೆಯನ್ನು ಕೊಟ್ಟು ಸರಿಯಾದ ಸಾಧನೆಯಲ್ಲಿ ತೊಡಗಿಸುವವನು ಗುರು. ಜಂಗಮದ ಕಲ್ಪನೆಯೂ ವಿಶಿಷ್ಟವಾದುದೆ. ಅವನ ನಿಲುವು ಗುರುವಿಗಿಂತ ಒಂದು ರೀತಿಯಲ್ಲಿ ಮುಂದಿನ ಹಂತದ್ದು; ವ್ಯಾಪಕಾರ್ಥವುಳ್ಳದು. ಸಾಮಾಜಿಕ ಹಾಗೂ ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದಾಗಲೂ ಜಂಗಮ ತನ್ನ ಸಾಧನೆಯಿಂದ ಜಗದ್ಭರಿತನಾಗಿ ಬೆಳೆದ ಒಂದು ಮಹಾಚೇತನ. ಸ್ಥಾಪನೆಗೊಂಡ ಲಿಂಗ ಸ್ಥಾವರವೆನಿಸಿದರೆ, ನಡೆದಾಡುವ ಜನವೆಲ್ಲ ಜಂಗಮವೆಂದೇ ಬಸವಣ್ಣನವರ ಭಾವನೆ. ಜಂಗಮತ್ವ ಒಂದು ಜಾತಿಯಲ್ಲ, ಅದು ಯಾವುದೇ ವ್ಯಕ್ತಿ ತನ್ನ ಸಾಧನೆಯಿಂದ ಪಡೆಯಬಹುದಾದ ಉಚ್ಚವಾದ ಆಧ್ಯಾತ್ಮಿಕ ನಿಲುವು. ಅದು ನಿಸ್ಸೀಮವಾದ ವ್ಯಕ್ತಿತ್ವ.

**ಸ್ಥಾವರ ಭಕ್ತಂಗೆ ಸೀಮೆಯಲ್ಲದೆ**
**ಘನಲಿಂಗ ಜಂಗಮಕ್ಕೆ ಸೀಮೆಯೆಲ್ಲಿಯದು?**
**ಅಂಬುಧಿಗೆ ಸೀಮೆಯಲ್ಲದೆ**
**ಹರಿವ ನದಿಗೆ ಸೀಮೆಯೆಲ್ಲಿಯದು?**
**ಭಕ್ತಂಗೆ ಸೀಮೆಯಲ್ಲದೆ**
**ಜಂಗಮಕ್ಕೆ ಸೀಮೆಯುಂಟೆ, ಕೂಡಲಸಂಗಮದೇವಾ?** (ಬ.ಷ.ವ. ೪೮೯)

ಸಾಧನೆಯಲ್ಲಿ ಏಕಾಗ್ರತೆಯನ್ನು ತಂದುಕೊಳ್ಳಲು ಮಂತ್ರ ಜಪ ಕಾರಣವಾಗಬಹುದು. 'ಕರಿಯಂಜುವದು ಅಂಕುಶಕ್ಕೆ' ಹಾಗೆಯೇ 'ಪಂಚ ಮಹಾಪಾತಕ ಅಂಜುವದು ಕೂಡಲಸಂಗನ ನಾಮಕ್ಕೆ', ಕ್ಷುದ್ರಶಕ್ತಿಗಳನ್ನು ಮೆಟ್ಟಿಹಾಕಿ ಅಂತರಂಗದಲ್ಲಡಗಿರುವ ಶಿವಶಕ್ತಿಗಳನ್ನು ಪ್ರಚೋದಿಸುವ ಮಹಾಶಕ್ತಿಯೇ ಈ ಮಂತ್ರ. 'ಓಂ ನಮಃ ಶಿವಾಯ' ಎಂಬ ಮಂತ್ರ ಸರ್ವಜನವಶ್ಯ ಎಂದಿದ್ದರೂ 'ದೇವರ ನೆನೆವುದೇ ಮಂತ್ರ' ಎಂದು ಬಸವಣ್ಣನವರು ತಮ್ಮ ಮನಸ್ಸಿನ ವೈಶಾಲ್ಯವನ್ನೂ ಉದಾರವಾದ ಮಾನವತೆಯನ್ನೂ ಮೆರೆದಿದ್ದಾರೆ.

ಪಂಚಾಚಾರದಲ್ಲಿ ವೀರಶೈವ ಧರ್ಮದ ನೈತಿಕ ನಿರೂಪಣೆಯ ವ್ಯಾಪಕ ಸ್ವರೂಪವಿದೆ. ನೈತಿಕ ನಿಷ್ಠೆ, ಧಾರ್ಮಿಕ ಸಾಧನೆಗಳೆರಡನ್ನೂ ಒಳಗೊಳ್ಳುವ ಪೂರ್ಣ ದೃಷ್ಟಿಯನ್ನು ಇದರಲ್ಲಿ ಕಾಣಬಹುದು. ಈ ನೀತಿ ನಿಯಮಗಳನ್ನು ಯಾಂತ್ರಿಕವಾಗಿ ಪಾಲಿಸಿದರೆ ಆಗದು. ಅಂಗಗುಣಗಳೆಲ್ಲ ಲಿಂಗಗುಣಗಳಾಗಿ ಪರಿವರ್ತಿತವಾಗುವುದೇ

ನಿಜವಾದ ಆಚಾರ. ಜ್ಞಾನ ಮತ್ತು ಕ್ರಿಯೆಗಳೆರಡನ್ನೂ ಅದು ಒಳಗೊಂಡಿದೆ. ಒಳ್ಳೆಯ ನಡತೆಯಲ್ಲದ ಹೀನ ಮನದವನಿಗೆ ದೀಕ್ಷೆ ಕೊಟ್ಟರೆ 'ಕುಂಬಳಕಾಯಿಗೆ ಕಬ್ಬುನದ ಕಟ್ಟು' ಕೊಟ್ಟಂತೆ. 'ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದಂತೆ'.

**ಸದಾಚಾರ ಸದ್ಭಕ್ತಿ ಇಲ್ಲದವರನೊಲ್ಲನಯ್ಯ;**
**ಅವರಾರಾಧನೆ ದಂಡ!**
**ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲ,**
**ಕೂಡಲಸಂಗಮದೇವ, ಭೂಭಾರಕರ!** (ಬ.ಷ.ವ. ೬೫೨)

ಅಹಿಂಸೆ, ಸತ್ಯನಿಷ್ಠೆಗಳು ಸದಾಚಾರದ ವ್ರತಗಳೇ. 'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪನಂತೆ!' ಭೃತ್ಯಾಚಾರದ ಸಾಕಾರಮೂರ್ತಿಗಳಾದ ಬಸವಣ್ಣನವರು 'ಕಾಗೆ ವಿಷ್ಟಿಸುವ ಹೊನ್ನ ಕಳಶವಹುದರಿಂದ, ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ' ಎಂದು ಬೇಡಿಕೊಂಡಿದ್ದಾರೆ. ತಾವು ನಂಬಿ ನಡೆದ ತತ್ತ್ವಕ್ಕಾಗಿ ಮತ್ತು ಅದರ ಸಾಧನೆಗಾಗಿ ತನ್ನ ಸರ್ವಸ್ವವನ್ನೂ ಅರ್ಪಿಸಿಕೊಳ್ಳುವ ಅವರ ವೀರನಿಷ್ಠೆ 'ಅರ್ಥವನರ್ಥವ ಮಾಡಿ ಕೋಳಾಹಳಂ ಗೈಯುತ್ತಿರಲಿ' ಎಂಬಂಥ ವಚನದಲ್ಲಿ ಭೇರಿನಾದದಂತೆ ಮೊಳಗಿದೆ. ಧರ್ಮದ ಸಾರ್ಥಕತೆಯಿರುವುದು ಆಚಾರದಲ್ಲಿ ಎಂಬುದು ಪಂಚಾಚಾರಗಳಲ್ಲಿ ಸ್ಪಷ್ಟವಾಗಿದೆ. ತಾವು ಕೈಕೊಂಡ ಸಾಮಾಜಿಕ ಹಿತದ ಕ್ರಾಂತಿ ಸಾಧನೆಯಲ್ಲಿ 'ಮರಣವೇ ಮಹಾನವಮಿ' ಎಂಬುದನ್ನು ಬಸವಣ್ಣನವರು ಕಾರ್ಯತಃ ಸಾಧಿಸಿ ತೋರಿದರು. ಧಾರ್ಮಿಕ ಆಚರಣೆಗಳು ವೈಯಕ್ತಿಕ ಹಿತವನ್ನು ಸಾಧಿಸುವುದರ ಜೊತೆಗೆ ಸಾಮಾಜಿಕ ಹಿತವನ್ನೂ ಸಾಧಿಸಬೇಕೆಂಬುದು ಈ ಆಚಾರಗಳ ಉದ್ದಕ್ಕೂ ಕಂಡುಬರುವ ಮಾತಾಗಿದೆ.

ಈ ಬಗೆಯ ಧಾರ್ಮಿಕ ಪ್ರಕ್ರಿಯೆಗಳನ್ನು ಬೋಧಿಸುವಾಗಲೂ ಅವರು ಯಾವುದೇ ಸಂಪ್ರದಾಯದ ಕಟ್ಟು ಕಟ್ಟಳೆಗೆ ಒಳಗಾಗಲಿಲ್ಲ. ಸಮಾಜದ ಹಿತಕ್ಕೆ ವಿರೋಧವಾದುದನ್ನು ಹೇಳಲಿಲ್ಲ. ಪ್ರತಿಯೊಂದು ಆಚರಣೆಯನ್ನು ಅವರವರ ಅನುಭವದ ಒರೆಗಲ್ಲಿಗೆ ಒಡ್ಡಿ ನೋಡುವಂತೆ ಮಾಡಿದ್ದಲ್ಲದೆ, ಎಲ್ಲಿಯೂ ಮತೀಯವಾದ ಸಂಕುಚಿತತೆಗೆ ಒಳಗಾಗಿ ವರ್ತಿಸಲಿಲ್ಲ. ಬಸವಣ್ಣನವರ ಈ ನಡೆ ಲೋಕದ ಮುಂದಿರುವ ಶಾಶ್ವತವಾದ ಆದರ್ಶವಾಗಿದೆ.

*(ಸಮತೋಲನ : ೧೮೮)*



೫



# ಬಸವಣ್ಣನವರ ವಚನಗಳ ಸಾಹಿತ್ಯಿಕ ಮೌಲ್ಯ

"ಕನ್ನಡದಲ್ಲಿರುವ ಅತ್ಯಂತ ಪ್ರಾಚೀನ ಸಾಹಿತ್ಯವೆಂದರೆ ವಚನ ಪ್ರಕಾರದ್ದು. ಈ ಪ್ರಕಾರವು ಇಡೀ ಭಾರತೀಯ ಸಾಹಿತ್ಯದಲ್ಲಿಯೇ ಮತ್ತೆಲ್ಲೂ (ಅವು ರಚಿತವಾದ ಕಾಲಕ್ಕಿಂತ ಹಿಂದೆ) ಕಾಣಸಿಗದಷ್ಟು ಅಸದೃಶ-ಅನನ್ಯ-ಅಪೂರ್ವ" ಎಂಬುದಾಗಿ ಡಾ. ಎಲ್.ಬಸವರಾಜು ಅರು ಅನೇಕ ಆಧಾರಗಳೊಂದಿಗೆ ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ.[೧] ಅಲ್ಲದೆ, "ಮೊದಲು 'ವಚನ'ವೆಂಬ ಪದವು ಬಸವಾದಿ ಪ್ರಮಥರ ಕೃತಿವೈವಿಧ್ಯಗಳನ್ನೆಲ್ಲ ಒಳಗೊಳ್ಳುವ ವ್ಯಾಪಕವಾದ ಪ್ರಯೋಗವಾಗಿತ್ತು" ಎಂಬುದನ್ನು ಎತ್ತಿ ತೋರಿಸಿದ್ದಾರೆ.[೨] ಆದರೆ ಲಾಕ್ಷಣಿಕರ ಹಿಡಿತಕ್ಕೆ ಒಳಗಾಗದ, ಅವರ ಅಳತೆಗೋಲಿಗೆ ಅತ್ತ ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಈ ವಚನ ಪ್ರಕಾರ ಹೇಗೆ ರೂಪು ತಳೆಯಿತು? ಇದರ ಉಗಮಕ್ಕೆ ಯಾವುದು ಮೂಲ ಸೆಲೆಯಾಗಿತ್ತು? ಎಂಬುದು ನಿಜಕ್ಕೂ ಕುತೂಹಲಕಾರಿಯಾದ ಸಂಗತಿಯಾಗಿದೆ. ವಚನ ಸಾಹಿತ್ಯದ ಮೂಲವನ್ನು ತಮಿಳಿನ ಶೈವ ಸ್ತೋತ್ರಗಳಲ್ಲಾಗಲಿ ಸಂಸ್ಕೃತದ 'ಛಂದೋಗಂಧಿ' ರಚನೆಯಲ್ಲಾಗಲಿ ಅರಸಲು ಹೋಗದೆ, "ವಚನದ ರಚನೆಗೆ ಮೂಲವನ್ನು ಮಾದರಿಯನ್ನು ನಮ್ಮ ಕನ್ನಡದಲ್ಲಿಯೇ ಹುಡುಕುವುದು ಹೆಚ್ಚು ಸೂಕ್ತ. ಫಲಕಾರಿ" ಎಂದು ಹೊರಟ ಡಾ. ಎಂ. ಚಿದಾನಂದಮೂರ್ತಿಯವರು "ಜನತೆಗೆ ಅತ್ಯಂತ ಸಮೀಪವಾಗಿದ್ದ, ಅವರ ಆದರವನ್ನು ಗಳಿಸಿದ್ದ ತ್ರಿಪದಿಯನ್ನೇ ಮಾರ್ಪಡಿಸಿಕೊಂಡು

---

೧. 'ಅಲ್ಲಮನ ವಚನ ಚಂದ್ರಿಕೆ' (೧೯೬೦) ಹಾಗೂ 'ಶಿವದಾಸ ಗೀತಾಂಜಲಿ'ಯ ಪೀಠಿಕೆಗಳನ್ನು ನೋಡಿ.

೨. 'ಶಿವದಾಸ ಗೀತಾಂಜಲಿ' ಪುಟ ೮೦

ಮತಬೋಧೆಯನ್ನು ಮನಮುಟ್ಟುವಂತೆ ನಿರೂಪಿಸಲು 'ವಚನ'ದ ಶೈಲಿಯ ಬೇರೊಂದು ವಿಧಾನವನ್ನು ವಚನಕಾರರು ರೂಪಿಸಿಕೊಂಡಿರಬಹುದು" ಎಂದು ಊಹಿಸಿದ್ದಾರೆ.[೧] ಸಂಪೂರ್ಣ ಕನ್ನಡ ಜಾಯಮಾನಕ್ಕೆ ಒಳಪಟ್ಟ 'ವಚನ'ದ ರೀತಿಯನ್ನು ನೋಡಿದರೆ ಮೇಲಿನ ಊಹೆ ಕೆಲಮಟ್ಟಿಗೆ ಸತ್ಯವೆಂದು ತೋರಬಹುದಾದರೂ ಅದಕ್ಕೆ ಬಲವಾದ ಆಧಾರಗಳಿಲ್ಲ.

ಹನ್ನೊಂದನೆಯ ಶತಮಾನದ ಹೊತ್ತಿಗಾಗಲೇ ಗದ್ಯದ ಸಾಮಾನ್ಯತೆಯನ್ನು ಮೀರಿದ, ಪದ್ಯದ ಪ್ರತಿಭೆಯನ್ನೊಳಗೊಂಡ 'ಶರಣರ ಸೂಳ್ನುಡಿ'ಯ ವಚನ ಪ್ರಕಾರ ವಿಶಿಷ್ಟವಾದ ಆಕಾರವನ್ನು ಪಡೆಯತೊಡಗಿತ್ತೆಂದು ಹೇಳಬಹುದು. ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಜೇಡರ ದಾಸಿಮಯ್ಯ ಮೊದಲಾದ ಶಿವಶರಣರ ವಚನಗಳ ಶೈಲಿ ಈ ಮಾತನ್ನು ದೃಢಗೊಳಿಸುತ್ತದೆ. ಜನಸಾಮಾನ್ಯರ ಭಾಷೆಯ ಸಹಜತೆಯನ್ನು ಧೈರ್ಯವಾಗಿ ಎತ್ತಿಕೊಂಡು ಕಿರಿದಾದ ನುಡಿಗಳಲ್ಲಿ ತನ್ನ ಅನುಭವದ ಸಾರವನ್ನು ಮನಸ್ಸಿಗೆ ಮುಟ್ಟುವಂತೆ ಹೇಳುವ ಜೇಡರ ದಾಸಿಮಯ್ಯನ ವಚನಗಳಲ್ಲಿ ಅವುಗಳ ರಚನೆ ಆಗಲೇ ಒಂದು ಪಾಕಕ್ಕೆ ಬಂದಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಈ ವಚನಗಳನ್ನು[೨] ನೋಡಬಹುದು.

**ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ**
**ಸುಳಿದು ಬೀಸುವ ಗಾಳಿ ನಿಮ್ಮ ದಾನ**
**ನಿಮ್ಮ ದಾನವನುಂಡು ಅನ್ಯರ ಹೊಗಳುವ**
**ಕುನ್ನಿಗಳನೇನೆಂಬೆ ರಾಮನಾಥ.**

**ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ?**
**ಕಡೆಗೀಲು ಬಂಡಿಗಾಧಾರ**
**ಕಡುದರ್ಪವೇರಿದ ಒಡಲೆಂಬ ಬಂಡಿಗೆ**
**ಮೃಡ ಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ.**

**ಉಂಕಿಯ ನಿಗುಚಿ, ಸರಿಗೆಯ ಸಮಗೊಳಿಸಿ**
**ಸಮಗಾಲನಿಕ್ಕಿ ಅಣಿಯೊಳು ಏಳು ಮುಟ್ಟಿದೆ.**
**ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು.**
**ಈ ಸೀರೆಯ ನೇಯ್ದವ ನಾನೋ ನೀನೋ ರಾಮನಾಥ.**

---

೧. 'ಸಂಶೋಧನ ತರಂಗ' ಪುಟ ೨೬

೨. 'ಜೇಡರ ದಾಸಿಮಾರ್ಯ ಪ್ರಶಸ್ತಿ', ಜೇಡರ ದಾಸಿಮಯ್ಯನ ವಚನಗಳು, ಪುಟ ೧೧೫, ೧೨೧, ೧೩೨

ಈ ವಚನಗಳಲ್ಲಿ ಸಹಜವಾಗಿ ಬರುವ ಪ್ರಾಸಾನುಪ್ರಾಸಗಳು, ಭಾವಲಯ, ಪ್ರಸಾದಗುಣ, ರೂಪಕ–ದೃಷ್ಟಾಂತಗಳು, ಕಾಯಕದ ಸಲಿಗೆಯ ಭಾಷೆಯಲ್ಲಿ ಆಧ್ಯಾತ್ಮಿಕ ಅನುಭವದ ನಿರೂಪಣೆ – ಇವು ನಮಗರಿವಿಲ್ಲದಂತೆಯೇ ಹೃದಯದಲ್ಲಿ ಕಾವ್ಯದ ಮುದ್ರೆಯನೊತ್ತಲು ಸಮರ್ಥವಾಗಿವೆ.[೧] ಮುಂದೆ ೧೨ ನೆಯ ಶತಮಾನದ ಹೊತ್ತಿಗೆ ಅನೇಕ ಶಿವಶರಣ–ಶರಣೆಯರು ಬಸವಣ್ಣನವರ ಅಪೂರ್ವವಾದ ಧಾರ್ಮಿಕ ಕ್ರಾಂತಿಯಲ್ಲಿ ಪಾಲುಗೊಂಡು ತಮ್ಮ ತಮ್ಮ ಕಾಯಕಗಳಲ್ಲಿ ನಿರತರಾಗಿದ್ದುಕೊಂಡೇ ಸಾಹಿತ್ಯದಲ್ಲಿಯೂ ಕ್ರಾಂತಿಯನ್ನೆಸಗಿದರು. ಕವಿಗಳ ಹಾಗೂ ಪಂಡಿತರ ಭಾಷೆಯಾದ ಹಳಗನ್ನಡಕ್ಕೂ ಜನರಾಡುವ ಭಾಷೆಗೂ ಇದ್ದ ಅಂತರವನ್ನು ಹೋಗಲಾಡಿಸಿ, ಆಡುನುಡಿಯನ್ನೇ ಸಾಹಿತ್ಯದ ಗುಡಿಯಲ್ಲಿ ಹಣತೆಯಾಗಿ ಬೆಳಗಿ ಕನ್ನಡ ಸರಸ್ವತಿಗೆ ಲಕ್ಷ ದೀಪೋತ್ಸವಗೈದರು. ಆ ಬೆಳಕಿನಲ್ಲಿ ತಮ್ಮ ಅರಿವನ್ನೂ, ಆದರ್ಶವನ್ನೂ, ಅಂತರಂಗವನ್ನೂ, ಪಡಿಮೂಡಿಸಿದರು. ಅವರ ಮಾತು 'ವಚನ ವೇದ'ವೆನಿಸಿತು. ಇವರೆಲ್ಲರ ನಡುವೆ ಭಕ್ತಿ ಭಾಂಡಾರಿ ಬಸವಣ್ಣನವರ ವ್ಯಕ್ತಿತ್ವ ನಿಲುವುಗನ್ನಡಿಯಾಗಿ ನಿಂತಿತು.

"ವಚನ ವಾಙ್ಮಯದಲ್ಲಿ ಬಸವಣ್ಣನವರ ವಚನಗಳಿಗೆ ಮೊದಲೆಡೆ ಮೀಸಲಾ"ಗಿದ್ದರೂ, ಅವರಿಗೂ ಪೂರ್ವದಲ್ಲಿ ನಡೆದ ಕೃಷಿಯನ್ನು ಗಮನಿಸದೆ ಮುಂದುವರಿಯುವಂತಿಲ್ಲ. ಪ್ರಾಚೀನ ವಚನಕಾರನಾದ ಜೇಡರ ದಾಸಿಮಯ್ಯನ ವಚನಗಳ ಸ್ಫೂರ್ತಿಯನ್ನು ಅಂಗೀಕರಿಸಿಕೊಂಡೇ ಬವಣ್ಣನವರು ತಮ್ಮ ರೀತಿಯಲ್ಲಿ ಅಗಾಧವಾದ ವಚನ ಸಾಹಿತ್ಯವನ್ನು ಸೃಷ್ಟಿಸಿದರು. ಇಬ್ಬರೂ ಸಂಸಾರವಂದಿಗರಾಗಿಯೇ ಇದ್ದು ಬಾಳಿನಲ್ಲಿ ನಿಷ್ಠೆಯಿಟ್ಟುಕೊಂಡು, ಬದುಕಿನ ಬಂಗಾರವನ್ನು ಒರೆಗೆ ಹಚ್ಚಿ ನೋಡಿದರು. ಭಾಷೆಯ ನುಡಿಕಟ್ಟಿನಲ್ಲಿಯೂ, ಉಪಮೆ–ದೃಷ್ಟಾಂತಗಳಲ್ಲಿಯೂ, ವಿಚಾರ–ಧೋರಣೆಯಲ್ಲಿಯೂ ದಾಸಿಮಯ್ಯನ ವಚನಗಳ ಪ್ರಭಾವವನ್ನು ಬಸವಣ್ಣನವರ ವಚನಗಳಲ್ಲಿ ಅಲ್ಲಲ್ಲಿ ಕಾಣುತ್ತೇವೆ.[೨]

**ದಾಸಿಮಯ್ಯ**

೧. ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥ.

೨. ಕೀಳು ಡೋಹರ ಕಕ್ಕ, ಕೀಳು ಮಾದರ ಚನ್ನ;
ಕೀಳು ಓಹಿಲದೇವ, ಕೀಳು ಉದ್ಭಟಯ್ಯ;
ಕೀಳಿಂಗಲ್ಲದೆ ಹಯನ ಕರೆಯದು ಕಾಣಾ ರಾಮನಾಥ

---

೧. 'ಜೇಡರ ದಾಸಿಮಯ್ಯ ವಚನ ಸಾಹಿತ್ಯದ ಪ್ರವರ್ತಕನಲ್ಲದಿದ್ದರೂ ಅದರ ಪ್ರಥಮ ಶಿಲ್ಪಿಯೆಂಬುದರಲ್ಲಿ ಸಂದೇಹವಿಲ್ಲ' –ಸಿದ್ದಯ್ಯ ಪುರಾಣಿಕ, ಶರಣಚರಿತಾಮೃತ, ಪುಟ ೪೦

೨. ಶ್ರೀ ಜ.ಚ.ನಿ.ಯವರು ಇನ್ನೂ ಕೆಲವು ಹೋಲಿಕೆಗಳನ್ನು ಸರ್ವಜ್ಞನ ವಚನಗಳಿಂದಲೂ ಎತ್ತಿ ತೋರಿಸಿದ್ದಾರೆ. ನೋಡಿ 'ಜೇಡರ ದಾಸಿಮಾರ್ಯ ಪ್ರಶಸ್ತಿ', ಪುಟ ೧೪೧, ೧೪೫

೩. ದೋಷರಹಿತ ಭಕ್ತರು ಅವಂಗೆ ಕುಲವೆಂದು
ಕೂಸ ಕೊಟ್ಟು ಕೂಡುಂಡರೆ
ಮೀಸಲ ಬೋನವ ನಾಯಿ ಮುಟ್ಟಿದಂತೆ ಕಾಣಾ ರಾಮನಾಥ
೪. ಕಳ್ಳ ಹಾದರಿಗರ ಸಂಪಾದನೆ
ಹೊಳ್ಳುಕುಟ್ಟಿ ಕೈ ಹೊಟ್ಟಾದಂತೆ ಕಾಣಾ ರಾಮನಾಥ.

ಬಸವಣ್ಣ

೧. "ನಂಬದೆ ನಚ್ಚದೆ ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆ"ಂದ ನಮ್ಮ ಕೂಡಲಸಂಗಮದೇವ.
೨. ಮೇಲಾಗಲೊಲ್ಲೆನು ಕೀಳಾಗಲಲ್ಲದೆ;
ಕೀಳಿಂಗಲ್ಲದೆ ಹಯನ ಕರೆವುದೆ?
ಮೇಲಾಗಿ ನರಕದೊಳೋಲಾಡಲಾರೆನು;
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು,
ಮಹಾದಾನಿ, ಕೂಡಲಸಂಗಮದೇವಾ.
೩. ಭಾಷೆ ತಪ್ಪಿದ ಬಳಿಕ ಪ್ರಾಣದಾಸೆಯನು ಹಾರಿದರೆ
ಮೀಸಲು ಸೊಣಗ ಮುಟ್ಟಿದಂತೆ ಕೂಡಲಸಂಗಮದೇವಾ.
೪. ನಮ್ಮ ಕೂಡಲ ಸಂಗಮದೇವನಲ್ಲದೆ ಅನ್ಯ ದೈವಕ್ಕೆರಗಿದರೆ
ಹೊಳ್ಳ ಕುಟ್ಟಿ ಕೈಹೊಟ್ಟೆಯಾದಂತಾಯಿತ್ತಯ್ಯಾ. (ಬ.ಷ.ವ.)

'ಆದ್ಯರ ವಚನ ಪರುಷ ಕಂಡಣ್ಣಾ' 'ಆದ್ಯರ ವಚನ ಆದ್ಯರಿಗಾಯಿತ್ತು. ವೇದ್ಯರಿಗಲ್ಲದೆ ಸಾಧ್ಯವಾಗದು' ಎಂದು ಮುಂತಾಗಿ ತಮ್ಮ ಹಿಂದಿನ ವಚನ ಸಾಹಿತ್ಯವನ್ನೂ ಅದರ ಹಿರಿಮೆಯನ್ನೂ ಬಸವಣ್ಣನವರು ಭಕ್ತಿಪೂರ್ವಕ ನೆನೆದಿರುವರಲ್ಲದೆ ಮುಂದಿನ ವಚನದಲ್ಲಿ ಅದರ ಸವಿಯನ್ನೂ ಸೂರೆಗೊಂಡಿದ್ದಾರೆ.

**ಹಾಲತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು**
**ತವರಾಜದ ನೊರೆ ತೆರೆಯಂತೆ**
**ಆದ್ಯರ ವಚನವಿರಲು,**
**ಬೇರೆ ಬಾವಿಯ ತೋಡಿ ಉಪ್ಪು ನೀರನುಂಬುವನ ವಿಧಿಯಂತೆ**
**ಆಯಿತ್ತೆನ್ನ ಮತಿ ಕೂಡಲಸಂಗಮದೇವಾ.**

ಆದ್ಯರ ವಚನದ ಸವಿಯನ್ನು ಬಣ್ಣಿಸಿದ್ದೇನೋ ಸರಿ; ಆದರೆ ತಮ್ಮ ಮತಿಯ ಬಗ್ಗೆ ಹೇಳಿಕೊಂಡುದು ಅವರ ನಮ್ರತೆಯ ಲಕ್ಷಣವೇ ಹೊರತು ವಾಸ್ತವ ಸಂಗತಿಯಲ್ಲ. ಬಸವಣ್ಣನವರು ತಮ್ಮ ಅಂತರಂಗದ ಬಾವಿಯನ್ನು

ತೋಡಿ ಜನತೆಯ ಜೀವನಕ್ಕೆ ಜೀವಜಲವನ್ನೇ ಉಕ್ಕಿಸಿದರೆಂದು ಹೇಳಬಹುದು. ಅವರ ದೆಸೆಯಿಂದ ಅಸಂಖ್ಯಾತ ಶಿವಶರಣರ ಭಕ್ತಿಗೆ ಬಣ್ಣವೇರಿತು. ಉಕ್ತಿಗೆ ಕಣ್ಣು ಮೂಡಿತು. ಸ್ವಂತ ಅನುಭವವಿಲ್ಲದೆ ಬಹುಶಃ ಯಾವ ಶರಣನೂ ವಚನ ರಚನೆಗೆ ಕೈ ಹಾಕಲಿಲ್ಲ. ಆದುದರಿಂದಲೇ ಅವರವರ ಕಾಯಕದ ಮಾತಿನ ಮೋಡಿ ರೂಪಕವಾಗಿ ಅವರ ವಚನಗಳಲ್ಲಿ ಒಡಮೂಡಿರುವುದು. ಅಂತರಂಗ ಶೋಧನೆ, ಆತ್ಮ ನಿರೀಕ್ಷಣೆ, ಈ ಯುಗದ ಧರ್ಮವೇ ಆಯಿತು. ಅಲ್ಲಮನ ಎತ್ತರಕ್ಕೆ ಹೋಗದಿದ್ದರೂ ಬಸವಣ್ಣನ ಹತ್ತಿರಕ್ಕೆ ಬಂದು ಎಲ್ಲರೂ ಅವನ ಅಂತಃಕರಣದಲ್ಲಿ ಮಿಂದು ಮಡಿಯಾದರು.

ಬಸವನ ಮಾತು, ಭಕ್ತಿಯ ಓಜೆ, ರೀತಿ, ಕಿಂಕರವೃತ್ತಿ; ಬಸವನ ಬಟ್ಟೆ, ಬಿಂಕದ ಭಾಷೆ, ನಿಷ್ಠೆ, ನೇಮ; ಬಸವನ ನೀತಿ, ನಿರ್ಮಲ ರೂಪು, ಗಾಡಿ, ಬುದ್ಧಿ, ಪುಣ್ಯದ ಲೀಲೆ; ಬಸವನ ಪೆರ್ಮೆ ನಚ್ಚಿನ ಕೂರ್ಮೆ, ಜಾಣು, ಶೀತಳ ಶಾಂತಿ – ಇವೇ ಮೊದಲಾಗಿ ಬಸವಣ್ಣನವರ ವ್ಯಕ್ತಿತ್ವದ ಗುಣಗಳಾಗಿರುವಂತೆಯೇ ಅವರ ವಚನಗಳ ಲಕ್ಷಣಗಳೂ ಆಗಿವೆ.[೧] ಭಕ್ತಿಯಿಂದ ಮೃದುಗೊಂಡ ಅವರ ಹೃದಯ ಮಾತನ್ನೂ ಹದಗೊಳಿಸದೆ ಬಿಡುತ್ತಿರಲಿಲ್ಲ. ಹೀಗಾಗಿ ಅವರ ವಚನಗಳು ಯಾವ ದೃಷ್ಟಿಯಿಂದಲೂ ಹುಸಿ ಹೋಗಿಲ್ಲ. ಭಕ್ತಿಯ ಸಾಧನೆ, ಅಂತರಂಗದ ಹೋರಾಟ,

---

೧. "ಬಸವನ ಮಾತೆ ಮಾತು ಬಸವಣ್ಣನ ಭಕ್ತಿಯ ಓಜೆಯೋಜೆ ಕೇಳ್
ಬಸವನ ರೀತಿ ರೀತಿ ಬಸವಣ್ಣನ ಕಿಂಕರ ವೃತ್ತಿ ವೃತ್ತಿ ಮೇಣ್
ಬಸವನ ಬಟ್ಟೆ ಬಟ್ಟೆ ಬಸವಣ್ಣನ ಬಿಂಕದ ಭಾಷೆ ಭಾಷೆ ಹೋ
ಬಸವನ ನಿಷ್ಠೆ ನಿಷ್ಠೆ ಬಸವಣ್ಣನ ನೇಮವೇ ನೇಮವುರ್ವಿಯೊಳ್ ॥
ಬಸವನ ಗೀತಿ ಗೀತಿ ಬಸವಣ್ಣನ ನಿರ್ಮಲರೂಪು ರೂಪು ಕೇಳ್
ಬಸವನ ಗಾಡಿ ಗಾಡಿ ಬಸವಣ್ಣನ ನಿರ್ಮಲ ಕೀರ್ತಿ ಕೀರ್ತಿ ಮೇಣ್ ।
ಬಸವನ ಬುದ್ಧಿ ಬುದ್ಧಿ ಬಸವಣ್ಣನ ಪುಣ್ಯದ ಲೀಲೆ ಲೀಲೆ ಹೋ
ಬಸವನ ರಕ್ಷೆ ರಕ್ಷೆ ಬಸವಣ್ಣನ ಶಿಕ್ಷೆಯೆ ಶಿಕ್ಷೆ ಲೋಕದೊಳ್ ॥
ಬಸವನ ಪೆರ್ಮೆ ಪೆರ್ಮೆ ಬಸವಣ್ಣನ ನೆಚ್ಚಿನ ಕೂರ್ಮೆ ಕೂರ್ಮೆ ಕೇಳ್
ಬಸವನ ಸೀಮೆ ಸೀಮೆ ಬಸವಣ್ಣನ ಶೀತಳ ಶಾಂತಿ ಶಾಂತಿ ಮೇಣ್ ।
ಬಸವನ ಜಾಣು ಜಾಣ್ ಬಸವಿದೇವನ ಭಾವದ ಕಾಣ್ಕೆ ಕಾಣ್ಕೆ ಹೋ
ಬಸವನ ಭಕ್ತಿ ಭಕ್ತಿ ಬಸವಣ್ಣನ ಯುಕ್ತಿಯೇ ಯುಕ್ತಿ ಲೋಕದೊಳ್ ॥
ಹರಿಹರನ 'ಬಸವರಾಜ ದೇವರ ರಗಳೆ' (ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ) ೧೯೬೫, ಪುಟ ೪೮

ಜೀವನವನ್ನು ಇಲ್ಲಿ ಸಲ್ಲುವಂತೆ ಮಾಡುವ ಹಂಬಲ, ನಡೆ–ನುಡಿ, ಆಚಾರ–ವಿಚಾರ, ಶ್ರುತಿ–ಸ್ವಭಾವಗಳಲ್ಲಿ ಸೂಕ್ಷ್ಮದೃಷ್ಟಿ, ಭಾವೋತ್ಕಟತೆ, ವಿಚಾರ ರಶ್ಮಿ ಇವೆಲ್ಲವನ್ನು ಒಳಗೊಂಡ ಸೂಳ್ನುಡಿ ಅವರ 'ಭಾವದ ಕಾಣ್ಕೆಯಾಗಿ ಪರಿಣಮಿಸಿತು. ಮರ್ತ್ಯಲೋಕವನ್ನು ಕರ್ತಾರನ ಕಮ್ಮಟವೆಂದು ಕಾಣುವ ಅವರ ದೃಷ್ಟಿ ನೆಲದ ಬದುಕಿಗೆ ಸಮೀಪವಾಗಿ ಮಾನವೀಯ ಭಾವನೆಗಳ ಕಾವಿನಲ್ಲಿ ಕಂಪೊಡೆಯಿತು. ಅವರು ನೇರವಾಗಿ ಸಾಹಿತ್ಯ ಸೃಷ್ಟಿಗೆ ಕೈಹಾಕದಿದ್ದರೂ ಸಾಹಿತ್ಯ ಅವರನ್ನರಸಿಕೊಂಡು ಬಂದು ಅವರ ಕೈ ಹಿಡಿಯಿತು. ಕನ್ನಡ ಆಡುನುಡಿಯ ಶಕ್ತಿ–ಸೊಗಸನ್ನೂ, ಹಿಡಿತ–ಮಿಡಿತವನ್ನೂ, ಹಾಸು–ಹೊಕ್ಕನ್ನೂ, ಸಲಿಗೆ–ಸಹಜತೆಯನ್ನೂ, ಉಲಿವು–ನಲಿವನ್ನೂ, ಅವರಿಗರಿಯದಂತೆಯೇ ಅವರ ವಚನಗಳು ಹೊರಹೊಮ್ಮಿಸಿದವು.

ಬಸವಣ್ಣನವರ ವಚನಗಳಲ್ಲಿ ಹಾಸು–ಹೊಕ್ಕಾಗಿರುವ ಸಂಪದ್ಯುಕ್ತವಾದ ಉಪಮೆ–ದೃಷ್ಟಾಂತಗಳು, ರೂಪಕ, ಪ್ರತಿಮೆಗಳು, ನುಡಿ–ಚಿತ್ರಗಳು, ಅನುಭವವನ್ನು ಭಟ್ಟಿಯಿಳಿಸಿದ ಕಾಂತಿಯುಕ್ತವಾದ ಸೂಕ್ತಿಗಳು, ಔಚಿತ್ಯಪೂರ್ಣವಾದ ಗಾದೆ ಮಾತುಗಳು, ಹಸನಾದ ನುಡಿಕಟ್ಟುಗಳು, ಆಡುಮಾತಿನಿಂದ ಕಿಕ್ಕಿರಿದ ಕಿರುನುಡಿಗಳು, ಸೂಕ್ಷ್ಮವಾದ ಭಾವಲಯ ಇವೆಲ್ಲವುಗಳಿಂದ ಅವರ ವಚನಗಳ ಸಾಹಿತ್ಯಿಕ ಮೌಲ್ಯ ಹೆಚ್ಚಿದೆ. ಅವುಗಳ ಪರಿಶೀಲನೆಯೇ ಈ ಲೇಖನದ ಉದ್ದೇಶ. ಷಟ್‌ಸ್ಥಲದ ಕಟ್ಟಿನಲ್ಲಿ[೧] ಅವರ ವಚನಗಳನ್ನು ಕ್ರಮಗೊಳಿಸುವುದು ರೂಢಿಯಾಗಿದ್ದರೂ, "ಬಸವಣ್ಣನವರ ಮೂರ್ತಿಸ್ವರೂಪ, ಸಂದೇಶ, ಸಾಧನ ಮಾರ್ಗ, ಸಿದ್ಧಿಯ ಹಂತ, ಪ್ರಗತಿಪರ ಪರಿಶುದ್ಧ ಸಮಾಜ ರಚನೆಯ ತಳಹದಿ ಇತ್ಯಾದಿ ವಿಚಾರ ಪ್ರಣಾಲಿ"ಯನ್ನನುಸರಿಸಿ ಹೊಸಬಗೆಯಿಂದ ಅವುಗಳನ್ನು ವಿಭಾಗಿಸುವಂತೆಯೇ[೨] "ಮಾನವ ಕುಲದ ದೃಷ್ಟಿಯಿಂದ ಒಂದು ಅತ್ಯಂತ ಮಹತ್ವದ 'ದರ್ಶನ'ವೆನಿಸಬಹುದಾದ ಶರಣರ 'ಸ್ವಯಂದರ್ಶನ'ವನ್ನು ಅವರ ಗೀತೆಗಳಿಂದ ಸಂಗ್ರಹಿಸಿ, ಜೋಡಣೆಗೊಳಿಸಿ ಒಂದು ಪ್ರಾಣ ಸಮಗ್ರತೆಯನ್ನು ತರುವ" ಪ್ರಯತ್ನವೂ ನಡೆದಿದೆ.[೩] 'ಕೂಡಲಸಂಗಮದೇವಾ

---

೧. ಷಟ್‌ಸ್ಥಲವು ಮಾನಸಿಕವಾಗಿ ಪರಮಾತ್ಮನನ್ನನುಸಂಧಾನ ಮಾಡುವ ಮಹಾ ಮಾರ್ಗ. ಇಲ್ಲಿ ಒಂದನ್ನು ಬಿಟ್ಟು ಇನ್ನೊಂದನ್ನು ಪಡೆಯುವ ಮೋಕ್ಷವೆಂಬುದೇ ಇಲ್ಲ... ಷಟ್‌ಸ್ಥಲದಲ್ಲಿ ಆತ್ಮನು ದೇಹಸಹಿತವಾಗಿಯೇ ಪ್ರಸಾದಕಾಯನಾಗುತ್ತಾನೆ. ಹೀಗೆ ಕಾಯವನ್ನು ಪ್ರಸಾದಮಯವನ್ನಾಗಿ ಮಾಡುವಲ್ಲಿ ಇಂದ್ರಿಯಗಳು ವಿಷಯವ್ಯಾಮೋಹವನ್ನು ಬಿಟ್ಟು ಲಿಂಗಪಥವನ್ನು ಹಿಡಿಯುತ್ತವೆ. ಆಂತರಿಕವಾದ ಈ ಮಾರ್ಪಾಟು ಷಟ್‌ಸ್ಥಲದ ಉದ್ದೇಶ" ಡಾ. ಆರ್. ಸಿ. ಹಿರೇಮಠ, 'ಷಟ್‌ಸ್ಥಲಪ್ರಭೆ' ಪುಟ ೧೨೦, ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆ, ೧೯೬೬

೨. 'ಶ್ರೀ ಬಸವಣ್ಣನವರ ವಚನ ಸಂಗ್ರಹ' ಸಂ. ಸ.ಸ.ಮಾಳವಾಡ, ಸಾಹಿತ್ಯ ಅಕಾಡಮಿಯ ಪ್ರಕಟಣೆ–೧೯೬೩

೩. 'ವಚನ ಸಾಹಿತ್ಯ ಸಂಗ್ರಹ' ಸಂ: ಸಂ.ಶಿ.ಭೂಸನೂರಮಠ, ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಶಾಖೆಯ ಪ್ರಕಟಣೆ, ೧೯೬೫.

ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ಮಾತಿನಿಂದ ಬಸವಣ್ಣನವರ ವಚನಗಳು ಹೃದಯದಿಂದ ನಿರಾಯಾಸವಾಗಿ ಹೊಮ್ಮಿದ ಪ್ರಾಮಾಣಿಕ ನುಡಿಗಳೆನ್ನುವುದರಲ್ಲಿ ಸಂದೇಹವಿಲ್ಲ.

ಕಾವ್ಯದಲ್ಲಿಯ ಅಲಂಕಾರಗಳೆಲ್ಲ ಉಪಮಾಮೂಲವಾದುವೇ ಎಂಬುದನ್ನು ಬೇರೆ ಹೇಳಬೇಕಿಲ್ಲ.[೧] ಆದ್ದರಿಂದ ಕಾವ್ಯಕರ್ಮವೆಲ್ಲ ವಿಶಾಲವಾದ ಅರ್ಥದಲ್ಲಿ ಉಪಮಾನಿಷ್ಠವಾದುದೇ. ಬಸವಣ್ಣನವರ ವಚನಗಳಲ್ಲಿ ಉಪಮೆ ಬರಿ ಹೋಲಿಕೆಯಾಗಿಲ್ಲ. ತಟ್ಟನೆ ಕಣ್ಣೆದುರು ಒಂದು ಚಿತ್ರವನ್ನು ನಿಲ್ಲಿಸುವ, ಆಡಿದ ಮಾತನ್ನು ಮನಕ್ಕೆ ಮುಟ್ಟಿಸುವ ಅರ್ಥವನ್ನು ಔಚಿತ್ಯಪೂರ್ಣವಾಗಿ ಬಿಂಬಿಸುವ ಸಾರ್ಥಕ ಕಾರ್ಯವನ್ನು ಅದು ಮಾಡಿದೆ. ಅವೆಲ್ಲವೂ ಸಾಮಾನ್ಯವಾಗಿ ಜೀವನದ ಅನುಭವದಿಂದಲೇ ಒಡಮೂಡಿರುವುದರಿಂದ ಜೀವಂತವಾಗಿ ಕಳಕಳಿಸುತ್ತಿವೆ. ಅಲ್ಲದೆ ಅವು ಆಡಾಡುತ್ತಾ ರೂಪಕಗಳಾಗಿ ಪರಿಣಮಿಸಿರುವುದೇ ಹೆಚ್ಚು. ಹತ್ತಾರು ವಾಕ್ಯಗಳಲ್ಲಿ ಹೇಳಬಹುದಾದುದನ್ನು ಹತ್ತು ಶಬ್ದಗಳಲ್ಲಿ ಅವು ಚಿತ್ರಿಸುವುದರಿಂದ ಸುಂದರವಾಗಿಯೂ ಸಾರವತ್ತಾಗಿಯೂ ಕಾವ್ಯಗುಣವನ್ನು ಮೈಗೂಡಿಸಿಕೊಂಡಿವೆ.[೨]

ವಚನಗಳಲ್ಲಿಯೂ ಉಪಮಾ ಪ್ರಪಂಚದ ವೈವಿಧ್ಯವನ್ನೂ, ಹೊಸತನದ ಸ್ವಾರಸ್ಯವನ್ನೂ ಈಗ ನೋಡೋಣ. ಕೂಡಲಸಂಗಮದೇವರ ನಿಲುವನ್ನು ಬಸವಣ್ಣನವರು ಕಂಡ ಅನುಭವದ ಅಭಿವ್ಯಕ್ತಿಯಿದು.

**ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು.**
**ಸಸಿಯೊಳಗಣ ರಸದ ರುಚಿಯಂತಿದ್ದಿತ್ತು.**
**ನನೆಯೊಳಗಣ ಪರಿಮಳದಂತಿದ್ದಿತ್ತು;**
**ಕೂಡಲಸಂಗಮದೇವಾ ನಿಮ್ಮ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು.**

ನೀರೊಡಲ ಬೆಂಕಿ, ಚಂದ್ರನ ಬೆಳುದಿಂಗಳಿನ ರುಚಿ, (ಅಥವಾ ವೃಕ್ಷಗಳ ಹಣ್ಣಿನ ರಸದ ರುಚಿ) ಮೊಗ್ಗೆಯೊಳಗಿನ ಪರಿಮಳ –ಇವು ಕಣ್ಣಿಗೆ ಕಾಣದಿದ್ದರೂ ಅಲ್ಲಿ ಇವೆ. ಈ ಮೂರು ಉಪಮೆಗಳು ಹೊರಗಿನ ವಸ್ತುಗಳನ್ನು ನಿರ್ದೇಶಿಸಿದರೆ ಕೊನೆಯದು 'ಕನ್ನೆಯ ಸ್ನೇಹದಂತೆ' –ಮಾನವೀಯ ಭಾವನೆಯ ಸೂಕ್ಷ್ಮತಂತಿಯನ್ನು

---

೧. 'ಪ್ರತಿಮಾವಸ್ತು ಪ್ರಭೃತಿಃ ಉಪಮಾ ಪ್ರಪಂಚಃ' ವಾಮನ, 'ಕಾವ್ಯಾಲಂಕಾರ ಸೂತ್ರ' iv.
೨. Metaphor is the unique expression of a writer's individual vision'. J.Middleton Murry.

ಮಿಡಿಯುತ್ತದೆ. ದೇವರ ನಿಲವನ್ನರಿಯುವುದೂ ಹಾಗೆಯೇ ಅನುಭವೈಕವೇದ್ಯ ಅನಿರ್ವಾಚ್ಯ ಎಂಬ ಅರ್ಥವಂತಿಕೆಯನ್ನು ಈ ಉಪಮೆಗಳು ಪಡೆದಿವೆ. ಅಲ್ಲದೆ ಉದಕ-ಕಿಚ್ಚು, ಸಸಿ-ರಸದ ರುಚಿ, ನನೆ-ಪರಿಮಳ ಈ ಗುಣಸೂಚನೆ ಕನ್ನೆಯ ಸ್ನೇಹಕ್ಕೆ ಒಂದು ರೀತಿ ಪೋಷಕವಾಗಿ ಅದರ ಅರ್ಥ ಗೌರವವನ್ನು ಹೆಚ್ಚಿಸಿದೆ. ಭಾವ ಅನುರೂಪವಾದ ಭಾಷೆಯಲ್ಲಿ ಸಂಭವಿಸಿ ಈ ವಚನವನ್ನು ಸಾರ್ಥಕಗೊಳಿಸಿದೆ. 'ಬಯ್ಕೆಯ ಕಿಚ್ಚಿ'ನ ಅದಮ್ಯತೆಯನ್ನು ಮೊದಲ ಸಾಲು ಸೂಚಿಸಿದರೆ ಉಳಿದ ಮೂರು ವಾಕ್ಯಗಳು, ಬೆಳದಿಂಗಳು, ಪರಿಮಳ, ಕನ್ನೆಯ ಸ್ನೇಹ-ಇವುಗಳ ಆಹ್ಲಾದತೆ, ಉಲ್ಲಾಸ, ಮಾರ್ದವತೆಯನ್ನು ಸಹಜವಾದ ಭಾಷೆಯಲ್ಲಿ ಔಚಿತ್ಯವನ್ನು ಗಮನಿಸಬೇಕು. ಅದರ ಬದಲು 'ಮೊಗ್ಗೆ' ಇತ್ಯಾದಿ ಯಾವ ಪದವನ್ನು ಬಳಸಿದರೂ ಅದರ ಕೋಮಲಭಾವಕ್ಕೆ ಇಷ್ಟು ಪುಷ್ಟಿಯೊದಗುತ್ತಿರಲಿಲ್ಲ.

ಉಪಮೆಗಳು ಚಿಕ್ಕ ಚಿಕ್ಕ ಪ್ರತಿಮೆಗಳಾಗಿ ಅರ್ಥಗೌರವವನ್ನು ಹೆಚ್ಚಿಸುತ್ತಾ ಹೋಗುತ್ತವೆ. ಕೆಲವು ವಚನಗಳಲ್ಲಿ :

**ನುಡಿದರೆ ಮುತ್ತಿನ ಹಾರದಂತಿರಬೇಕು.**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.**
**ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.**
**ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು.**
**ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ?**

ನಾವು ಆಡುವ ಮಾತು ಹೇಗಿರಬೇಕು ಎಂಬ ಆದರ್ಶ ನಿರೂಪಣೆಯ ಜೊತೆಗೆ ಒಳ್ಳೆಯ ಸಾಹಿತ್ಯದ ಲಕ್ಷಣವನ್ನು ಸೂಚಿಸುವ ಅರ್ಥಸ್ಫುರಣೆಯನ್ನು ಈ ವಚನ ಒದಗಿಸುತ್ತದೆ. ನುಡಿದರೆ ಮುತ್ತಿನ ಹಾರದಂತೆ 'ಸುಂದರ'ವಾಗಿರಬೇಕು. (ಬಿಡಿಬಿಡಿಯಾಗಿದ್ದರೂ ಇಡಿಯಲ್ಲಿ ಶೋಭಾಯಮಾನವಾಗಿ) ಮಾಣಿಕ್ಯ ದೀಪ್ತಿಯಂತೆ ತಂಬೆಳಕನ್ನು ನೀಡಬೇಕು. ಸ್ಫಟಿಕದ ಸಲಾಕೆಯಂತೆ ಒಳಗು ಹೊರಗೆಲ್ಲ ಪಾರದರ್ಶಕವಾಗಿ 'ನಿಜ' ನಿಂತಯಿರಬೇಕು. (ಆಡುವವನ ಅಂತರಂಗವೂ ಅಲ್ಲಿ ಮೂಡಿರಬೇಕು) ಇಷ್ಟೇ ಅಲ್ಲ, ಲಿಂಗ (ಪರಮಸತ್ಯ) ಮೆಚ್ಚಿ ಸೈ ಎನ್ನುವಂತಿರಬೇಕು. (ಆತ್ಮಸಾಕ್ಷಿಯಾಗಿ ಆಡಬೇಕು) ಬಸವಣ್ಣನವರು ಇಷ್ಟಕ್ಕೇ ನಿಲ್ಲುವುದಿಲ್ಲ. ಅಂಥ ನುಡಿಗೆ ತಕ್ಕ ನಡೆಯೂ ಇರಬೇಕೆನ್ನುತ್ತಾರೆ. ಇದು ಅವರ ಬದುಕಿನ ಮುಖ್ಯ ಸೂತ್ರವೇ ಆಗಿದೆ.

ಕೂಡಲಸಂಗನ ಶರಣರು ಸ್ವತಂತ್ರರು, ಧೀರರು, ಅವರ ನಡೆ ಅಂತಿಂಥದಲ್ಲ. ಅವರೊಡನೆ ವಿನಯದಿಂದ ಅರಿತು ಆಚರಿಸಬೇಕೇ ಹೊರತು ಮರೆದು

ಸರಸವಾಡಬಾರದು. ಹಾಗೆ ಮಾಡಿದರೆ ಪರಿಣಾಮ ಭೀಕರವಾದೀತೆಂಬ ಎಚ್ಚರಿಕೆಯನ್ನು ಅವರು ನೀಡಿದ್ದಾರೆ.

**ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸಿದಂತೆ**
**ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ**
**ಹುಲಿಯ ಮೀಸೆಯ ಹಿಡಿದುಕೊಂಡು**
**ಒಲಿದುಯ್ಯಲೆಯಾಡುವಂತೆ,**
**ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ**
**ಸುಣ್ಣದಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ !**

ಇಲ್ಲಿಯ ಮಾಲೋಪಮೆಯಲ್ಲಿಯ 'ಹಾವಿನ ಹೆಡೆ', 'ಉರಿವ ಕೊಳ್ಳಿ', 'ಹುಲಿಯ ಮೀಸೆ', 'ಸುಣ್ಣದ ಕಲ್ಲು' –ಈ ದೃಷ್ಟಾಂತಗಳು ಶರಣರನ್ನು ಕೆಣಕಿದರೆ ಸ್ವೇಚ್ಛಾಚಾರಿಗಳಿಗೆ ಆಗುವ ಉಗ್ರಪರಿಣಾಮವನ್ನು ಚೆನ್ನಾಗಿ ವ್ಯಕ್ತಪಡಿಸುತ್ತವೆ. 'ಒಲಿದುಯ್ಯಲೆಯಾಡುವಂತೆ' ಎನ್ನುವಲ್ಲಿಯ ವ್ಯಂಗ್ಯ ಅಂಥವರ ಮೈಮರೆವನ್ನು ಎತ್ತಿ ತೋರಿಸುತ್ತದೆ.

ಹೀಗೆ ಒಂದು ಭಾವವನ್ನು ಸಮಗ್ರವಾಗಿ ಉಪಮೆಗಳ ಮೂಲಕ ಒಂದೊಂದು ವಚನದಲ್ಲಿ ಇಡಿಯಾಗಿಯೂ ಮಾರ್ಮಿಕವಾಗಿಯೂ ಬಿಂಬಿಸಿದಂತೆ ಬಿಡಿಬಿಡಿಯಾಗಿಯೂ ಅವರ ವಚನಗಳಲ್ಲಿ ಅವು ಇಬ್ಬನಿಯ ಕಿಡಿಯಂತೆ ಹರಡಿಕೊಂಡಿವೆ.[೧] ಕಪ್ಪೆ, ಸರ್ಪ, ಮೊಲ, ಮೃಗ, ಕಾಗೆ, ಕೋಳಿ, ನರಿ, ನಾಯಿ, ಓತಿ, ಕೋತಿ, ಕೋಣ, ಕರಿ, ಕುರಿ, ಕತ್ತೆ, ಹಂದಿ, ಬೆಕ್ಕು, ಇಲಿ, ಗಿಳಿ, ಗಿಳಿ, ಗೀಜಗ –ಇವೇ ಮೊದಲಾದ ಪಶು ಪಕ್ಷಿಗಳ ಸ್ವಭಾವ, ಗುಣ, ದೋಷಗಳನ್ನು ಅನೇಕ ವಚನಸಂದರ್ಭಗಳಲ್ಲಿ ಉಪಮೆ–ರೂಪಕ–ದೃಷ್ಟಾಂತಗಳಾಗಿ ಬಸವಣ್ಣನವರು ಮೂಡಿಸಿದ್ದಾರೆ. ಸುಲಭವಾಗಿ ಮಾತು ಮನಸ್ಸಿಗೆ ಮುಟ್ಟುವುದಲ್ಲದೆ ಇದರಿಂದ ಮೂಲ ಅನುಭವದ ಸತ್ಯ ಇನ್ನಷ್ಟು ಪ್ರಕಾಶಗೊಳ್ಳುತ್ತದೆ. ಹೀಗೆ "ತೀವ್ರಾನುಭವಶೀಲರೂ–ಮಹಾ ಸಾಧಕರೂ ಆದ ಬಸವಣ್ಣನವರ ವಚನಗಳಲ್ಲಿ ಅವರ ಅಂತರಂಗದ ಬೆಳವಣಿಗೆಯ ನೂರು ಸ್ಥಿತಿಗಳನ್ನು ನಡಿಗೆಯ ನೂರು ಗತಿಗಳನ್ನು ಪ್ರತಿಮಿಸುವ ಸಹಸ್ರವಿಧ ರೂಪಕಗಳನ್ನು ಕಾಣುತ್ತೇವೆ."[೨]

---

೧. ಇದೇ ಲೇಖಕನ 'ವಚನ ಸಾಹಿತ್ಯದಲ್ಲಿ ಉಪಮೆ' ಎಂಬ ಲೇಖನವನ್ನು ನೋಡಿ 'ಸಾಹಿತ್ಯ ಚಿಂತನ' ಪುಟ ೯, ಮಿಂಚಿನ ಬಳ್ಳಿಯ ಪ್ರಕಟಣೆ, ೧೯೬೬
೨. ಸುಜನಾ, 'ಹೃದಯ ಸಂವಾದ' (೧೯೬೪) ಪುಟ ೯೭

ವಚನಗಳಲ್ಲಿ ಅಲ್ಲಲ್ಲಿ ಕಿಡಿಕಿಡಿ ಕೆತ್ತಿರುವ ಉಪಮೆ–ರೂಪಕಗಳ ಸೊಗಸನ್ನೀಗ ನೋಡೋಣ. ಬಸವಣ್ಣನವರು ತಮ್ಮ ಮನಸ್ಸನ್ನು ಅರೆದು ಒರೆದು ಜರಿದು ಝಂಕಿಸಿ ನೋಡಿಕೊಂಡಷ್ಟು ಇನ್ನಾರೂ ನೋಡಿರಲಾರರು. ನೋಡಿದ್ದರೂ ಇಷ್ಟೊಂದು ಪ್ರಾಮಾಣಿಕವಾಗಿ ನಿರೂಪಿಸಲಾರರು. ನಿಂತಲ್ಲಿ ನಿಲ್ಲದೆ 'ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದು' ಈ ಮನ. ವಿಷಯಕ್ಕೆ ಹರಿಯುವಲ್ಲಂತು 'ಅಂದಣವನೇರಿದ ಸೊಣಗನಂತೆ' ತನ್ನ ಸ್ಥಾನಮಾನವನ್ನು ಲಕ್ಷಿಸದು. ಮುನ್ನಿನ ಸ್ವಭಾವವನ್ನು ಬಿಡದು. 'ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ' ಸಂಸಾರ ಸಂಗದಲ್ಲಿ ಮೈಮರೆತಿದೆ. 'ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ' ಮೃತ್ಯುವಿನ ನೆರಳಿನಲ್ಲಿದ್ದರೂ ಅದನ್ನರಿಯದು. 'ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ' ಕೆಡುವೊಡಲ ಹೊರೆಯುತ್ತಿದೆ. 'ಹಬ್ಬಕ್ಕೆ ತಂದ ಹರಕೆಯ ಕುರಿ, ತೋರಣಕ್ಕೆ ತಂದ ತಳಿರ ಮೇಯು'ವ ಕರುಣಾಜನಕ ಸ್ಥಿತಿ; ಇನ್ನಾವಾಗ ಕೊಂದಿಹರೆಂಬ ಅರಿವೇ ಇಲ್ಲದಂತೆ. 'ಓತಿ ಬೇಲಿವರಿದಂತೆ', 'ಹೊತ್ತಿಂಗೊಂದು ಪರಿಯಪ್ಪ ಗೋಸುಂಬೆಯಂತೆ' ಇದರ ಬಣ್ಣ ಬದಲಾಗುತ್ತಲೇ ಇರುತ್ತದೆ. ಹಗಲಿಗೆ ಕಣ್ಣು ಮುಚ್ಚಿ, ತಲೆಕೆಳಗಾಗಿ ಜೋತಾಡುವ 'ಬಾವುಲ ಬಾಳುವೆಯಂತೆ' ಅದರ ತಿರುವು ಮುರುವು. 'ಚಿತ್ತ ಅತ್ತಿಯ ಹಣ್ಣಿ'ನಂತೆ ರೂಪಕ್ಕೆ ಚಂದ; ಅದರ ಒಳಗೆ ಹುಳುಗಳಲ್ಲದೆ ಹುರುಳಿಲ್ಲ. 'ಕಂಬಳಿಯಲ್ಲಿ ಕಣಕವ ನಾದಿದಂತೆ' ಅದು ತೊಡಕು ತೊಡಕಾಗಿದೆ. 'ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ' ಕಾಯ ವಿಕಾರ, ಮನೋವಿಕಾರಗಳು, 'ನನ್ನ ಬಿಡು' 'ತನ್ನ ಬಿಡು' ಎಂದು ಜಗ್ಗಾಡುತ್ತಿದೆ. 'ನೀನಿಲ್ಲದೆ ಒಳಕೊಂಬುವರಿಲ್ಲ'ವೆಂದು ಬಸವಣ್ಣನವರ ಜೀವ ಕೂಡಲಸಂಗಮದೇವನಲ್ಲಿ 'ಸಮುದ್ರದೊಳಗಣ ಸಿಂಪಿನಂತೆ' ಬಾಯಬಿಡುತ್ತಿದೆ; 'ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ', 'ಅಂಬೇ' ಎಂದು ಕರೆಯುತ್ತಿದೆ.

ಬಸವಣ್ಣನವರ ಭಕ್ತಿಯ ಸಾಧನೆ, ಅದಕ್ಕಾಗಿ ಅವರು ಪಟ್ಟ ಪಾಡು, ಯಾವ ಹಿರಿತನಕ್ಕೂ ಹೋಗಿ ಹಾಯದೆ 'ಬಚ್ಚಬರಿಯ ಬಸವನೆನಿಸಯ್ಯಾ' ಎಂಬ ವಿನಯದ ಹಂಬಲ –ಇವು ಅವರ ಕಿರು ನುಡಿಗಳಲ್ಲಿ ಹಿರಿದಾಗಿ ಮೂಡಿವೆ. ಎಲ್ಲ ಶರಣರ ನಡುವೆ ತಾವು 'ಮಾವಿನ ಕಾಯೊಳಗೊಂದು ಎಕ್ಕೆಯಕಾಯಿ' ಎಂದುಕೊಳ್ಳುತ್ತಾರೆ. ಬಡಿಗೆಯನ್ನು ನುಂಗಿದಂತೆ ಸೆಟೆದುಕೊಂಡಿರದೆ 'ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದರೆ ಬೇಡಿದ ಪದವಿ'ಯನ್ನು ಕೊಡುತ್ತಾನೆ ಕೂಡಲಸಂಗಮದೇವ. (ಸುಮ್ಮನೆ ಸತ್ವವಿಲ್ಲದೆ ಬಾಗುವುದಲ್ಲ; ಬೀಗಿ ಬೆಳೆದ ಗೊನೆವಾಳೆಯಂತೆ ಫಲಭರಿತವಾಗಿ ಸಮರ್ಪಣ ಭಾವದಿಂದ ಬಾಗಬೇಕು). ಭಕ್ತಿ ಎಂಬುದು ಬಾಯಿಮಾತಿನಷ್ಟು ಹಗುರಲ್ಲ. 'ಕರಗಸದಂತೆ ಹೋಗುತ್ತ ಕೊಯ್ವುದು,

ಬರುತ್ತ ಕೊಯ್ವುದು', ಅಷ್ಟು ಕಷ್ಟದಾಯಕ. 'ಊರ ಸೀರೆಗೆ ಅಗಸ ತಡಬಡಿ ಹಡೆದಂತೆ' ಹೊನ್ನು, ಹೆಣ್ಣು, ಮಣ್ಣು ತನ್ನದೆಂದು ಮರುಳಾಗಿ ಸುಮ್ಮನೆ ಕೆಟ್ಟವರೆಷ್ಟು! ಒಡೆಯರಿಗೆ ಒಡವೆಯನೊಪ್ಪಿಸದೆ ಸುಮ್ಮನೆ ಮೊರೆಯಿಡುತ್ತಿದೆ ಮನಸ್ಸು. ಆದ್ದರಿಂದ ಈ ಶುದ್ಧ ಸಾಧಕ ಜೀವಿಗೆ 'ನೆತ್ತಿಯಲ್ಲಿ ಅಲಗ ತಿರುಹುವಂತಪ್ಪ', 'ಕೊಯ್ದ ಮೂಗಿಗೆ ಕನ್ನಡಿ ತೋರುವಂತಪ್ಪ', 'ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ' ವೇದನೆ. ಈ ದೇಹ, ಮನಸ್ಸು ದೇವರಿಗೆ ಮೀಸಲಾಗಿರುವಾಗ 'ಸಂಸಾರವೆಂಬ ಶ್ವಾನನಟ್ಟಿ ಮೀಸಲು ಕೆಡಿಸಬೇಡ' ಎಂದು ಅವರ ಪ್ರಾರ್ಥನೆ. 'ಹೊಸತಿಲ ಪೂಜಿಸಿ ಹೊರವಟ್ಟು ಹೋದ ಒಕ್ಕಲಿತಿಯಂತೆ' ಒಡೆಯರ ಬಗ್ಗೆ ಉದಾಸೀನ ಮಾಡಿದರೆ ಆ ಭಕ್ತಿಗೇನು ಬೆಲೆ? 'ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ ನಮಸ್ಕಾರ ಮಾಡುವನಂತೆ' ಕೆರೆಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ.

ಶಿವನ ಸೊಮ್ಮು ಶಿವನಿಗೆ ಅರ್ಪಿತವಾಗಬೇಕು. ಇಲ್ಲವಾದರೆ 'ಸ್ವಧರ್ಮದಲ್ಲಿ ಗಳಿಸಿದ ಪಿತನ ಧನವ ಅಧರ್ಮದಲ್ಲಿ ಕೆಡಿಸುವ ಸುತನಂತೆ', 'ಹಲವು ಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು (ಬಣಿವೆ) ಒಂದು ಮಿಡುಕುರಲ್ಲಿ (ಕಿಡಿ) ಬೇದಂತೆ' ಹಾಳಾಗಿ ಹೋಗುತ್ತದೆ. ತತ್‌ಕಾಲ ಪ್ರೇಮವನರಿಯದೆ ವಿಭವಕ್ಕೆ ಮಾಡಿದವನ ಭಕ್ತಿ 'ಇರುಳು ಸತ್ತಿಗೆಯ ಹಿಡಿಸಿಕೊಂಡಂತೆ' ವ್ಯರ್ಥ. ಭಕ್ತಿಯನ್ನು ತನುವುಕ್ಕಿ, ಮನವುಕ್ಕಿ ಮಾಡಬೇಕು. 'ಓಡಲಾಗದ ಮೃಗವು ಸೊಣಗಂಗೆ ಮಾಂಸವ ಕೊಡುವಂತೆ' ಅನಿವಾರ್ಯವಾಗಿ ಮಾಡುವದಾಗಬಾರದು. 'ಹಾವ ತೋರಿ ಹವಿಯ ಬೇಡುವಂತೆ' ಡಂಬಾಚಾರದ್ದು ಆಗಬಾರದು. ಮನದಲ್ಲಿ ದೃಢವಿಲ್ಲದೆ ಲಿಂಗಾರ್ಚನೆ ಮಾಡುವ ಭಕ್ತಿ 'ಕಳನೇರಿ ಕೈ (ಆಯುಧ) ಮರೆದಂತೆ' ವ್ಯರ್ಥ, ಅವಮಾನಕರ. ಶಿವನ ಆದಿ ಅಂತವನರಿಯದವನ ಭಕ್ತಿ 'ಓಡಿನೊಳಗಗೆಯ ಹೊಯ್ದಂತೆ' ಕೆಳಗೆ ಬೇರು ನಾಟಿ ನಿಲ್ಲುವಂತಿಲ್ಲ, ಮೇಲೆ ಮೊಳಕೆಯೊಡೆದು ಬೆಳೆಯುವಂತಿಲ್ಲ.

ಶಿವಪಥವನರಿವಡೆ ಶರಣರ ಸಂಗವೇ ಮೊದಲು. ಅವರ ಬರವನ್ನು 'ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ' ಕಾತುರದಿಂದ ಕಾಯುತ್ತದೆ ಬಸವಣ್ಣನವರ ಹೃದಯ. 'ಹಾವ ಕಿಚ್ಚ ಮುಟ್ಟಿಹ ಶಿಶುವೆಂದು ಹೆತ್ತತಾಯಿ ಮಗನ ಬೆಂಬತ್ತಿ ಬಪ್ಪಂತೆ' ಕೂಡಲಸಂಗಮದೇವನೂ ಈ ನಿಜಭಕ್ತನನ್ನು ವಾತ್ಸಲ್ಯದಿಂದ ರಕ್ಷಿಸುತ್ತಾನೆ. 'ಸೂರ್ಯನುದಯ ತಾವರೆಗೆ ಜೀವಾಳ, ಚಂದ್ರಮನುದಯ ನೆಯ್ದಿಲೆಗೆ ಜೀವಾಳ'. ಹಾಗೆಯೆ ಶರಣರ ಬರವು ಇವರಿಗೆ ಪ್ರಾಣ ಜೀವಾಳ. 'ಸಾಸವೆಯ ಮೇಲೆ ಸಾಗರವರಿದಂತೆ' ಆನಂದದಲ್ಲಿ ತಾವೇ ಮುಳುಗಿ ಹೋಗುತ್ತಾರೆ. ಶರಣರು

'ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ' ಇಪ್ಪರು. ತೋರಿಕೆಗೆ ಅಸ್ಥವ್ಯಸ್ತವಾಗಿ ಕಂಡರೂ ಹೃದಯ ತುಪ್ಪದಂತೆ ತಿಳಿ. ಅವರ ವಚನ 'ಬೇವ ಸವಿದಂತೆ', 'ಅಧರಕ್ಕೆ ಕಹಿ, ಉದರಕ್ಕೆ ಸಿಹಿ'.

ಗುರುಶಿಷ್ಯ ಸಂಬಂಧವಾದುದಕ್ಕೆ 'ಕಿಚ್ಚಿನಲ್ಲಿ ಕೋಲ ಬಯ್ಚಿಟ್ಟಂತಿರು'ವುದೇ ಚಿಹ್ನೆ. 'ಆಲಿಕಲ್ಲ ಹರಳಿನಂತೆ, ಹರಳಿನ ಪುತ್ಥಳಿಯಂತೆ' ಕೂಡಲಸಂಗಮದೇವರ ಮುಟ್ಟಿ ತನುಕರಗಿ ನೆರೆವ ಸುಖವ ಏನೆಂದು ಬಣ್ಣಿಸುವುದು? 'ಅನುಭಾವವೆಂಬುದು ರಚ್ಚೆಯ ಮಾತೆ? ಸಂತೆಯ ಸುದ್ದಿಯೇ? ಬೀದಿಯ ಪಸಾರವೇ?' ಎಂದು ಕೇಳುತ್ತಾರೆ ಬಸವಣ್ಣನವರು. 'ಅನುಭಾವವೆಂಬುದು ನೆಲದ ಮರೆಯ ನಿಧಾನ, ಅಂತರಂಗದ ರತ್ನ, ಶಿಶು ಕಂಡ ಕನಸು ಕಾಣಿರೋ' ಎಂಬುದು ಅವರ ಸೂಕ್ತಿ ಸುಧೆ.

ಹೀಗೆ ಬಸವಣ್ಣನವರ ವಚನಗಳಲ್ಲಿಯ ಉಪಮಾ ಲೋಕ ಒಂದು ಅದ್ಭುತ ಚಿತ್ರಸೃಷ್ಟಿ. ಕನ್ನಡದ ಬೇರಾವ ಕವಿಯಲ್ಲಿಯೂ ಉಪಮೆ ಇಷ್ಟೊಂದು ಜೀವನ ವೈವಿಧ್ಯದ ವ್ಯಾಪ್ತಿಯನ್ನು ಪಡೆದಿರುವುದು ವಿರಳ. 'ಉಪಮಾಲಂಕಾರದ ಪ್ರಯೋಗಕ್ಕೆ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರಿಗೆ ಪ್ರಥಮಸ್ಥಾನ ದೊರೆಯಬೇಕು" ಎಂದು ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿಗಳು ನುಡಿದಿರುವುದು ಯಥಾಯೋಗ್ಯವಾಗಿದೆ.[೧]

ಬಸವಣ್ಣನವರು ವಚನಗಳಲ್ಲಿ ದೃಷ್ಟಾಂತಗಳನ್ನು ಹೇರಳವಾಗಿ ಬಳಸಿದ್ದಾರೆ. ಮತತತ್ತ್ವ ಪ್ರತಿಪಾದನೆಗೂ ಕಾವ್ಯಮಯ ನಿರೂಪಣೆಗೂ ಏಕರೀತಿಯಾಗಿ 'ದೃಷ್ಟಾಂತ'ಗಳು ಪುಷ್ಟಿಯನ್ನೊದಗಿಸಬಲ್ಲವು.[೨] ಇದಕ್ಕೆ ಹಲವಾರು ಉತ್ತಮ ನಿದರ್ಶನಗಳನ್ನು ವಚನಗಳಿಂದ ಎತ್ತಿಕೊಡಬಹುದು. ಒಡಪಿನಂತೆ ಅಂದವಡೆದ ದೃಷ್ಟಾಂತವುಂಟು.

**ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ,**
**ಅಂಬುಜಕೆ ಭಾನುವಿನುದಯದ ಚಿಂತೆ,**
**ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ**
**ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ.**

---

೧. 'ವಚನಧರ್ಮಸಾರ' ಪುಟ ೨೧೮
೨. 'ದೃಷ್ಟಾಂತಃ ಪುನರೇತೇಷಾಂ ಸರ್ವೇಷಾಂ ಪ್ರತಿಬಿಂಬನಂ' ಕಾವ್ಯಪ್ರಕಾಶ

ಪೌರಾಣಿಕ ಸಂಗತಿ, ಕವಿಸಮಯ ಇತ್ಯಾದಿಗಳನ್ನು ಬಳಸಿ ತಮ್ಮ ಅಭಿಪ್ರಾಯವನ್ನು ಬಸವಣ್ಣನವರು ಸಮರ್ಥವಾಗಿ ಪ್ರತಿಪಾದಿಸಬಲ್ಲರು.

**ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ,**
**ಚಂದ್ರ ಕುಂದೆ ಕುಂದುವುದಯ್ಯಾ**
**ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ?**
**ಅಂಬುಧಿಯ ಮುನಿಯಾಪೋಷಣವ ಕೊಂಬಲ್ಲಿ**
**ಚಂದ್ರಮನಡ್ಡ ಬಂದನೆ?**
**ಆರಿಗಾರೂ ಇಲ್ಲ; ಕೆಟ್ಟವಂಗೆ ಕೆಳೆಯಿಲ್ಲಾ.**
**ಜಗದ ನಂಟ ನೀನೇ ಅಯ್ಯಾ, ಕೂಡಲಸಂಗಮದೇವಾ.**

ಮೊದಲಿನ ಎರಡು ಸಾಲುಗಳಲ್ಲಿಯ ಹೇಳಿಕೆಗೆ ಮೂರನೆಯ ಸಾಲು ಒಮ್ಮೆಲೇ ತಿರುವನ್ನೊದಗಿಸಿ 'ಅಂಬುಧಿ ಬೊಬಿಟ್ಟಿತ್ತೆ?' ಎಂಬ ಚೈತನ್ಯಾರೋಪದಿಂದ ಅದಕ್ಕೊಂದು ತಾರ್ಕಿಕ ಮೊನೆಯನ್ನು ತಂದುಕೊಡುತ್ತದೆ. ಕೊನೆಯ ಎರಡು ಸಾಲುಗಳಲ್ಲಿ ವ್ಯಕ್ತವಾದ ಸಾಧಾರಣ ಸತ್ಯ 'ಜಗದ ನಂಟ ನೀನೇ ಅಯ್ಯಾ' ಎಂಬಲ್ಲಿ ಗಂಟೆ ಹೊಡೆದಂತೆ ಕಿವಿಯಲ್ಲಿ ನಿನದಿಸಿ ಇಡಿಯ ಭಾವಕ್ಕೆ ಪೂರ್ಣತೆಯನ್ನೊದಗಿಸಿದೆ. 'ಕೆಟ್ಟವಂಗೆ ಕೆಳೆಯಿಲ್ಲಾ'[೧] ಎಂಬ ಗಾದೆಯ ಮಾತು ಇಲ್ಲಿ ಸಾರ್ಥಕಗೊಂಡಿದೆ.

ಒಂದರಮೇಲೊಂದು ದೃಷ್ಟಾಂತವನ್ನಿಟ್ಟಾಗ ಭಾವ ಇನ್ನಷ್ಟು ಖಚಿತಗೊಳ್ಳುತ್ತದೆ.

**ಮಡಕೆಯ ಮಾಡುವರೆ ಮಣ್ಣೇ ಮೊದಲು**
**ತೊಡುಗೆಯ ಮಾಡುವರೆ ಹೊನ್ನೇ ಮೊದಲು**
**ಶಿವಪಥವನರಿವಡೆ ಗುರುಪಥವೇ ಮೊದಲು**
**ಕೂಡಲಸಂಗಮದೇವನರಿವಡೆ**
**ಶರಣರ ಸಂಗವೇ ಮೊದಲು.**

ಇಲ್ಲಿ ಪ್ರತಿಯೊಂದು ವಾಕ್ಯರಚನೆಯಲ್ಲಿಯ ತೂಕಬದ್ಧತೆಯನ್ನೂ ಆಂತರಿಕ ಲಯವನ್ನೂ ಗಮನಿಸಬೇಕು. ಮೊದಲ ಸಾಲಿನಲಿಯ 'ಮ'ಕಾರ ಪ್ರಾಸ ನಿರಾಯಾಸವಾಗಿ ಬಂದಿರುವುದಲ್ಲದೆ ಎಲ್ಲ ದೃಷ್ಟಾಂತಗಳೂ ಕವಿಯ

---

೧. `The fallen man has no friend'- English proverb.

ಮೂಲಾನುಭವಕ್ಕೆ ಅನುರೂಪವಾಗಿ ಹೊಂದಿಕೊಂಡಿವೆ. ಬಸವಣ್ಣನವರು ತರ್ಕಪೂರ್ಣವಾಗಿಯೂ, ಅಷ್ಟೇ ಸೊಗಸಾಗಿಯೂ ತಮ್ಮ ಮಾತಿನ ನಿಲವನ್ನು ತೋರಿಸಬಲ್ಲರೆಂಬುದಕ್ಕೆ ಇಂಥ ವಚನಗಳು ನಿದರ್ಶನವಾಗಿವೆ.

ನಿತ್ಯ ಜೀವನದಲ್ಲಿಯ ಅನೇಕ ಘಟನೆಗಳಲ್ಲಿ ಕಾವ್ಯಾಂಶವನ್ನು ಕಾಣುವ ಮತ್ತು ಅದಕ್ಕೆ ಮಾತಿನಲ್ಲಿ ಮೂರ್ತ ಸ್ವರೂಪವನ್ನು ಕೊಡುವ ಕಲೆ ವಚನಗಳಲ್ಲಿ ಹೆಜ್ಜೆ ಹೆಜ್ಜೆಗೆ ಗೋಚರಿಸುತ್ತದೆ.

**ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು?**
**ಕೋಳಿಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವ?**
**ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಯಿಂದ ಕರಕಷ್ಟ!**

ವಿಧಿರೂಪವಾಗಿರದೆ ಪ್ರಶ್ನಾರ್ಥಕವಾಗಿರುವ ಇಲ್ಲಿಯ ಮಾತು 'ವ್ಯತಿರೇಕ ದೃಷ್ಟಾಂತ'ದ ಮೂಲಕ ವ್ಯಂಗ್ಯಾಂಶವನ್ನು ಸೂಚಿಸುತ್ತ ಹೆಚ್ಚು ಪರಿಣಾಮಕಾರಿಯಾಗಿದೆ.

ಸುಲಭವಾದ ಕೆಲವೇ ಪದಗಳಿಂದ ಒಂದು ಚಿತ್ರವನ್ನು ಕಟ್ಟಿ ಕಣ್ಣ ಮುಂದೆಯೇ ಒಂದು ಕ್ರಿಯೆ ನಡೆಯಿಸಿ ತೋರುವ ದೃಷ್ಟಾಂತಗಳು ಉಂಟು.

**ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ,**
**ಆಕಳ ಹಾಲನೆರೆದು, ಜೇನುತುಪ್ಪವ ಹೊಯ್ದರೆ,**
**ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ?**

ಹುಟ್ಟುಗುಣ ಏನು ಮಾಡಿದರೂ ಹೋಗದು ಎಂಬುದನ್ನು ಈ ದೃಷ್ಟಾಂತ ಮಾರ್ಮಿಕವಾಗಿ ನಿರೂಪಿಸುತ್ತದೆ. ಮೂಲತಃ ಕಹಿಯಾದ ಬೇವಿನ ಬೀಜಕ್ಕೆ ಸಿಹಿಯ ಸಂಸ್ಕಾರ ಎಷ್ಟಾದರೂ ಅದು ತನ್ನ ಗುಣ ಬಿಡದು. ಬೀಜದಂತೆ ಫಲ. "ಕುಂಬಳಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೆ?" ಅಳಿಮನದವರಿಗೆ ಶಿವದೀಕ್ಷೆ ಕೊಟ್ಟರೂ ಹಾಗೆಯೇ ಎನ್ನುತ್ತಾರೆ, ಬಸವಣ್ಣನವರು.

**ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ**
**ಮೇಲೆ ಪಲ್ಲವಿಸಿತ್ತು ನೋಡಾ.**

ಲಿಂಗದ ಬಾಯಿ ಜಂಗಮ ಎಂಬುದನ್ನು ಪ್ರತಿಪಾದಿಸಲು ಔಚಿತ್ಯಪೂರ್ಣವಾದ ಲೋಕಸಿದ್ಧ ಸತ್ವವನ್ನೊಳಗೊಂಡ ದೃಷ್ಟಾಂತ ನೀಡಿದ್ದಾರೆ ಬಸವಣ್ಣನವರು.

**ಹಾವಿನ ಡೊಂಕು ಹುತ್ತಕ್ಕೆ ಸಸಿನ;**
**ನದಿಯ ಡೊಂಕು ಸಮುದ್ರಕ್ಕೆ ಸಸಿನ;**
**ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ.**

ಹಾವು ಎಷ್ಟು ಅಂಕುಡೊಂಕಾಗಿ ಹರಿದಾಡಿದರೂ ಹುತ್ತವನ್ನು ಅದು ನೇರವಾಗಿಯೇ ಹೋಗುತ್ತದೆ. ನದಿ ಎಷ್ಟು ಅಡ್ಡತಿಡ್ಡ ಹರಿದರೂ ಸಮುದ್ರವನ್ನು ಹುಡುಕಿಕೊಂಡೇ ಅದು ಹರಿಯುತ್ತದೆ. ಶರಣರು ಬಹಿರ್ ವ್ಯಾಪಾರಗಳಲ್ಲಿ ತೊಡಗಿದ್ದರೂ ಲಿಂಗದಲ್ಲಿ ಅವರ ನಿಷ್ಠೆ ಅಚ್ಚಳಿಯದೇ ನೆಲೆಗೊಂಡಿರುತ್ತದೆ. ಹೀಗೆ 'ಡೊಂಕು' ಎನ್ನುವ ಪದ ಈ ಸಂದರ್ಭದಲ್ಲಿ ನಾಣ್ಯದ ಎರಡು ಮುಖಗಳಂತೆ ಅರ್ಥವತ್ತಾಗಿ ಚಲಾವಣೆ ಪಡೆದಿದೆ.

ಶರಣರ ಮನಸ್ಸು ಅಗಾಧವಾದುದು. ಅವರು ಮನಸ್ಸು ಬಿಚ್ಚಿ ಮಾತನಾಡಿದರೆ ಆ ನುಡಿ ದೈವೀಸ್ವರೂಪದ್ದಾಗಿಯೇ ಇರುತ್ತದೆ. ಇದಕ್ಕೆ ಮೂರು ಮುತ್ತಿನಂಥ ನಿದರ್ಶನಗಳನ್ನೊದಗಿಸಿ ಭಾವ ಜಗ್ಗನೆ ಪ್ರಕಾಶಗೊಳ್ಳುವಂತೆ ಮಾಡಿದ್ದಾರೆ, ಕೆಳಗಿನ ವಚನದಲ್ಲಿ:

**ಕೆರೆ ಹಳ್ಳ ಬಾವಿಗಳು ಮೈದೆಗೆದರೆ**
**ಗುಳ್ಳೆ, ಗೊರಚೆ, ಚಿಪ್ಪುಗಳು ಕಾಣಬಹುದು;**
**ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು;**
**ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ**
**ಲಿಂಗವೆ ಕಾಣಬಹುದು.**

ಜಗತ್ತಿನಲ್ಲಿ ಎಲ್ಲ ವಸ್ತುಗಳೂ ಒಂದೇ ಯೋಗ್ಯತೆಯವಲ್ಲ. ಅವುಗಳ ಸ್ವರೂಪಕ್ಕೆ ತಕ್ಕಂತೆ ಅವುಗಳ ಒಳತಿರುಳು. ಕೆರೆ ಹಳ್ಳ ಬಾವಿಗಳು ತಮ್ಮಲ್ಲಿರುವುದನ್ನೆಲ್ಲ ಹೊರಗಿಟ್ಟರೆ, ಗುಳ್ಳೆ, ಗೊರಚೆ, ಚಿಪ್ಪು ಮುಂತಾದವುಗಳನ್ನು ಕಾಣುತ್ತೇವೆ. ವಿಶಾಲವೂ ಗಂಭೀರವೂ ಆದ ಸಮುದ್ರ ಮೈದೆಗೆದರೆ ಬೆಲೆಯುಳ್ಳ ರತ್ನಗಳನ್ನು ದೊರಕಿಸಬಹುದು. ಶರಣರ ಮನಸ್ಸು ಸಮುದ್ರಕ್ಕಿಂತಲೂ ಘನವಾದದ್ದು. ಅವರು ಮನದೆರೆದು ಮಾತನಾಡಿದರೆ ಆ ನುಡಿಯಲ್ಲಿ ಅಪ್ರಮೇಯವಾದ ಲಿಂಗವನ್ನೇ ಕಾಣಬಹುದು. ಕೆರೆ, ಹಳ್ಳ, ಬಾವಿ, ವಾರಿಧಿ ಈ ಪ್ರತಿಮೆಗಳು ಶರಣರ ಮನದ ಅಗಾಧತೆಗೆ ಹಂತ ಹಂತವಾಗಿ ದಾರಿ ಮಾಡಿಕೊಡುತ್ತವೆ.

ಕವಿ ಕಾವ್ಯದ ಪರವಾಗಿ ಈ ವಚನವನ್ನು ಅನ್ವಯಿಸುತ್ತ ಕೆರೆ, ಹಳ್ಳ, ಬಾವಿಯ ಸಾಧಾರಣ ಕವಿಗಳು, 'ವಾರಿಧಿ' ಸದೃಶರಾದ ಮಹಾಕವಿಗಳು,

ಇವೆಲ್ಲವನ್ನೂ ಮೀರಿದ ಅಮೃತವಾಣಿಯ ಅನುಭಾವಿಗಳು ಎಂಬುದಾಗಿ ಅರ್ಥವಿಸಿದ್ದುಂಟು.[೧]

ಕೆಲವು ಸಂದರ್ಭಗಳಲ್ಲಿ ಬಸವಣ್ಣನವರು ವಿರೋಧಾಂಶವನ್ನೊಳಗೊಂಡ ಪ್ರಶ್ನೆಗಳನ್ನೆಸೆದು ಎರಡು ಪ್ರತಿಮೆಗಳ ಸಮತೂಕವನ್ನು ಪ್ರಶ್ನೋತ್ತರ ರೂಪದಲ್ಲಿ ನಿರ್ವಹಿಸಿ ಅರ್ಥಕ್ಕೆ ಪರಿಪುಷ್ಟಿಯನ್ನೊದಗಿಸುವುದುಂಟು.

**ಕರಿ ಘನ; ಅಂಕುಶ ಕಿರಿದೆನ್ನಬಹುದೆ? ಬಾರದಯ್ಯ.**
**ಗಿರಿ ಘನ; ವಜ್ರ ಕಿರಿದೆನ್ನಬಹುದೆ? ಬಾರದಯ್ಯ**
**ತಮಂಧ ಘನ; ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯ**
**ಮರಹು ಘನ; ನಿಮ್ಮ ನೆನೆವ ಮನ ಕಿರಿದೆನ್ನಬಹುದೆ? ಬಾರದಯ್ಯ.**

ಕರಿ-ಅಂಕುಶ, ಗಿರಿ-ವಜ್ರ, ತಮಂಧ-ಜ್ಯೋತಿ ಹೀಗೆ ಜೋಡು ಪ್ರತಿಮೆಗಳ ಮೂಲಕ ಕಿರಿದರ ಹಿರಿಮೆಯನ್ನು ಮಾರ್ಮಿಕವಾಗಿ ತೋರಿಸಿ ನೆನೆವ ಮನದ ಘನತೆಯನ್ನು ಸ್ಫುಟಗೊಳಿಸಲಾಗಿದೆ. ಈ ವಚನದ ಒಂದೊಂದು ಸಾಲು ವಿಚಾರಸರಣಿಯನ್ನು ತೂಗಿ ತೋರಿಸುವ ಕೌಶಲ್ಯದಿಂದ ಭಾಷೆಯನ್ನು ಮಸೆದ ಅಲಗಿನಂತೆ ಹೊಳೆಯಿಸುತ್ತದೆ.

ಪ್ರಶ್ನೆಯಲ್ಲಿಯೇ ಉತ್ತರವನ್ನೂ ಅಡಗಿಸಿ ಅರ್ಥವನ್ನು ಸೂಚಿಸುವ ಈ ವಚನ:

**ಮೇರು ಗುಣವನರಸುವುದೆ ಕಾಗೆಯಲ್ಲಿ ?**
**ಪರುಷ ಗುಣವನರಸುವುದೆ ಕಬ್ಬುನದಲ್ಲಿ ?**
**ಸಾಧು ಗುಣವನರಸುವುದೆ ಅವಗುಣಿಯಲ್ಲಿ ?**
**ಚಂದನ ಗುಣವನರಸುವುದೆ ತರುಗಳಲ್ಲಿ ?**
**ಸರ್ವ ಗುಣಸಂಪನ್ನ ಲಿಂಗವೇ, ನೀನೆನ್ನಲ್ಲಿ ಅವಗುಣವನರಸುವರೆ?**

ಮೇರು, ಪರುಷ, ಸಾಧು, ಚಂದನ-ಇವುಗಳ ಸಾನ್ನಿಧ್ಯ ಸಂಪರ್ಕದಲ್ಲಿ ಕಾಗೆ, ಕಬ್ಬುನ, ಅವಗುಣಿ, ತರುಗಳು ಕ್ರಮವಾಗಿ ತಮ್ಮ ಅವಗುಣವನ್ನು ಕಳೆದುಕೊಳ್ಳುತ್ತವೆ. ಸರ್ವಗುಣಸಂಪನ್ನ ಲಿಂಗ ತನ್ನಲ್ಲಿ ಅವಗುಣವನರಸುವ ಪ್ರಮೇಯವೇ ಇಲ್ಲವೆಂಬ ಬಸವಣ್ಣನವರ ಮಾತು ಮೇಲಿನ ದೃಷ್ಟಾಂತಗಳಿಗೆ ಕಲಶಪ್ರಾಯವಾಗಿದೆ.

---

೧. ಡಾ.ಜಿ.ಎಸ್. ಶಿವರುದ್ರಪ್ಪ, 'ಪರಿಶೀಲನೆ' ಪುಟ ೮೮

ಮನದ ಕಾಠಿಣ್ಯ ಕರಗಿ, ಮೃದುಗೊಂಡು ಹದಗೊಳ್ಳದೆ ಎನಿಸುಕಾಲ ಪೂಜಿಸಿ ಫಲವೇನು? 'ಎನಿಸುಕಾಲ ಕಲ್ಲು ನೀರೊಳಗಿರ್ದರೇನು ನೆನೆದು ಮೃದುವಾಗಬಲ್ಲುದೆ?' ಕೂಡಲಸಂಗನ ಶರಣರನ್ನು ಅರಿಯದವರ ಕೈಯಲ್ಲಿ ಲಿಂಗವಿದ್ದು ಫಲವೇನು? ಎಂಬುದಕ್ಕೆ ನಾಲ್ಕು ದೃಷ್ಟಾಂತಗಳನ್ನು ಮನಸ್ಸಿನಲ್ಲಿ ಅಚ್ಚೊತ್ತುವಂತೆ ನಿರೂಪಿಸಲಾಗಿದೆ.

**ಅರ್ಥರೇಖೆಯಿದ್ದಲ್ಲಿ ಫಲವೇನು, ಅಯುಷ್ಯರೇಖೆ ಇಲ್ಲದನಕ್ಕ?**
**ಹಂದೆಯ ಕೈಯಲ್ಲಿ ಚಂದ್ರಾಯುಧವವಿದ್ದು ಫಲವೇನು ?**
**ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು ?**
**ಮರ್ಕಟನ ಕೈಯಲ್ಲಿ ಮಾಣಿಕ್ಯವಿರ್ದು ಫಲವೇನು ?**

ಇಡಿಯ ವಚನವೇ ಗಾದೆಯ ಮಾತಿನಿಂದ ಕೋದುಕೊಂಡಿರುವ ಸೊಗಸನ್ನೂ ಇಲ್ಲಿ ಕಾಣಬಹುದು.

ಆತ್ಮ ಅಲಿಪ್ತ ಎಂಬ ಪರಿಜ್ಞಾನವಿಲ್ಲದೆ ಜೀವನದಲ್ಲಿ ಮಾಡುವ ಸಕಲ ಕಾರ್ಯಗಳೂ ಮಾಡಿದವನಿಗೇ ಬಳಲಿಕೆಯಲ್ಲದೆ ನಿಜದ ತುದಿಗೆ ಒಯ್ಯಲಾರವು ಎಂಬುದನ್ನೂ ಸರ್ವಪರಿಚಿತ ನಿದರ್ಶನಗಳಿಂದಲೇ ಸಿದ್ಧಪಡಿಸುತ್ತಾರೆ:

**ಅಳೆಯುತ್ತ ಅಳೆಯುತ್ತ ಬಳಲುವವರಲ್ಲದೆ ಕೊಳಗ ಬಳಲುವದೆ?**
**ನಡೆಯುತ್ತ ನಡೆಯುತ್ತ ಬಳಲುವರಲ್ಲದೆ ಬಟ್ಟೆ ಬಳಲುವದೆ ?**
**ಶ್ರವವ ಮಾಡುತ್ತ ಮಾಡುತ್ತ ಬಳಲುವರಲ್ಲದೆ ಕೋಲು ಬಳಲುವದೆ?**
**ನಿಜವನರಿಯದೆ ಭಕ್ತ ಬಳಲುವನಲ್ಲದೆ ಲಿಂಗ ಬಳಲುವದೆ ?**

ಸಾಮಾನ್ಯವಾಗಿ ದೋಷವೆನಿಸಬಹುದಾದ ಪುನರುಕ್ತಿ ಇಲ್ಲಿ ಕ್ರಿಯೆಯ ಸಾತತ್ಯವನ್ನು ಸೂಚಿಸಿ ಗುಣವೆನಿಸಿದೆ. 'ನಿಜ'ದ ಗುರಿಯನ್ನರಿತು ಕಾರ್ಯ ಮಾಡಿದರೆ ಅದರಿಂದ ಸಂತೋಷ, ಪಟ್ಟ ಶ್ರಮವೂ ಸಾರ್ಥಕ–ಎಂಬುದನ್ನು ಇಲ್ಲಿಯ ದೃಷ್ಟಾಂತಗಳು ಎಷ್ಟು ಸಮರ್ಥವಾಗಿ ಸೂಚಿಸುತ್ತವೆ!

ಕೆಮ್ಮನೆ ಉಪಚಾರಕ್ಕೆ ಮಾಡುವವರನ್ನು ತೀಕ್ಷ್ಣವಾಗಿ ಚುಚ್ಚುತ್ತದೆ ಬಸವಣ್ಣನವರ ಮಾತು:

**ತನ್ನಾಶ್ರಯದ ರತಿಸುಖವನು ತಾನುಂಬ ಊಟವನು**
**ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?**
**ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ**
**ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?**

ಮನುಷ್ಯನ ಮೂಲಪ್ರವೃತ್ತಿಗಳನ್ನು ಮೀಟಿ ನುಡಿಸುವ ಶಕ್ತಿ ಇಲ್ಲಿಯ ಮಾತುಗಳಲ್ಲಿದೆ. ವಿಚಾರದ ತೀಕ್ಷ್ಣತೆಗೆ ತಕ್ಕಂತೆ ಮಾತೂ ಹರಿತವಾಗುತ್ತದೆ. ಇಂಥ ಸಂದರ್ಭದಲ್ಲಿ ಓದು, ವಿದ್ಯೆ ಇವು ಆತ್ಮಜ್ಞಾನಕ್ಕೆ ಸಹಾಯವಾಗದಿದ್ದರೆ ಅದರಿಂದ ಪ್ರಯೋಜನವಿಲ್ಲವೆಂಬುದನ್ನು ದೃಷ್ಟಾಂತರೂಪದಲ್ಲಿ ಕಾಣಿಸಿ ರೂಪಕದಲ್ಲಿ ಕೊನೆಗಾಣಿಸಿದ ವಚನವನ್ನು ನೋಡಿ:

**ಗಿಳಿಯೋದಿ ಫಲವೇನು ?**

**ಬೆಕ್ಕು ಬಹುದ ಹೇಳಲರಿಯದು !**

**ಜಗವೆಲ್ಲ ಕಾಂಬ ಕಣ್ಣು**

**ತನ್ನ ಕೊಂಬ ಕೊಯಿಲೆಯ ಕಾಣಲರಿಯದು!**

**ಇದಿರ ಗುಣವ ಬಲ್ಲೆವೆಂಬರು;**

**ತಮ್ಮ ಗುಣವನರಿಯರು ಕೂಡಲಸಂಗಮದೇವಾ.**

ಆತ್ಮಜ್ಞಾನವಿರದಿದ್ದರೆ ನಾವು ಕಲಿತದ್ದೆಲ್ಲ ಗಿಳಿಪಾಠ, ಅಷ್ಟೆ. ಬೆಕ್ಕು ಯಾವಾಗ ಬಂದು ತನ್ನನ್ನು ಹಿಡಿದೀತೆಂಬುದನ್ನು ಓದಿ ಜಾಣವಾದ ಗಿಳಿ ಹೇಳಲಾರದು. ಜಗತ್ತನ್ನೆಲ್ಲ ಕಾಣುವ ನಮ್ಮ ಕಣ್ಣು ತನ್ನನ್ನು ಕೊಲ್ಲಬರುವ ಆಯುಧವನ್ನು ಕಾಣಲರಿಯದು. ಹಾಗೆಯೇ ಎರಡನೆಯವರ ಬಗ್ಗೆ ಬಲ್ಲೆವೆನ್ನುವವರೂ ತಮ್ಮನ್ನೇ ತಾವರಿಯರು. 'ಗಿಳಿಯೊಂದು' ಶುಷ್ಕ ಪಾಂಡಿತ್ಯಕ್ಕೂ 'ಜಗವೆಲ್ಲ ಕಾಂಬಕಣ್ಣು' ಸೂರ್ಯನಿಗೂ, 'ಕೊಂಬಕೊಯಿಲೆ' ರಾಹುವಿಗೂ ಸಂಕೇತವಾಗಿ ದ್ವಂದ್ವಾರ್ಥವನ್ನು ಮಿಡಿದು ಭಾವವನ್ನು ಪರಿಪುಷ್ಟಿಗೊಳಿಸುತ್ತವೆ. 'ಇದಿರ ಗುಣವ ಬಲ್ಲೆವು' ಎಂಬಲ್ಲಿಯ ಆಡುಮಾತಿನಲ್ಲಿ ವ್ಯಂಗ್ಯ ಭಾವದ ಸೂಚನೆಯಿದೆ.[೧] ಈ ಎಲ್ಲ ಭಾವವನ್ನು ಈ ವಚನಶಿಲ್ಪದಲ್ಲಿ ಕಡೆದಿಡಲಾಗಿದೆ.

ಶರಣರ ಮುಂದೆ ತಾವೇತರ ಭಕ್ತ ಎಂದು ಹೇಳಿಕೊಳ್ಳುವ ನಮ್ರಭಾವ ಬಸವಣ್ಣನವರದು. ಅವರ ಹಿರಿಮೆಯಲ್ಲಿಯೇ ಅವರ ಪ್ರಭಾವದಲ್ಲಿಯೇ ತಾವು ಇರುವುದನ್ನು 'ಮರದ ನೆಳಲಲ್ಲಿದ್ದು ತನ್ನ ನೆಳಲನರಸಬಹುದೆ?' ಎಂಬ ಮಾತಿನಲ್ಲಿ ಸುಂದರವಾಗಿ ಅಡಕಗೊಳಿಸಿದ್ದಾರೆ. ಮೇಲಾಗಿ ನರಕದಲ್ಲಿ ಓಲಾಡುವುದಕ್ಕಿಂತಲೂ

---

೧. ಈ ಭಾವವನ್ನು ಸರ್ವಜ್ಞಕವಿ ತನ್ನ ಒಂದು ತ್ರಿಪದಿಯಲ್ಲಿ ಸೊಗಸಾಗಿ ನಿರೂಪಿಸಿದ್ದಾನೆ:
ಬಲ್ಲೆನೆನ್ನುವ ಮಾತು ಎಲ್ಲವೂ ಹುಸಿ ಕಾಣೊ
ಬಲ್ಲರೆ ಬಲ್ಲೆನೆನಬೇಡ । ಸುಮ್ಮನಿರ
ಬಲ್ಲವನೆ ಬಲ್ಲ ಸರ್ವಜ್ಞ॥

ಶರಣರ ಪಾದಕ್ಕೆ ಕೀಳಾಗಿ, ರಕ್ಷೆಯಾಗಿರುವುದೇ ಮೇಲು ಎನ್ನುತ್ತಾರೆ ಮುಂದಿನ ಸುಂದರ ದೃಷ್ಟಾಂತದಲ್ಲಿ:

**ಮೇಲಾಗಲೊಲ್ಲೆನು ಕೀಳಾಗಲಲ್ಲದೆ**
**ಕೀಳಿಂಗಲ್ಲದೆ ಹಯನ ಕರೆವುದೆ?**
**ಮೇಲಾಗಿ ನರಕದೊಳೋಲಾಡಲಾರೆನು:**
**ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು,**
**ಮಹಾದಾನಿ, ಕೂಡಲಸಂಗಮದೇವಾ.**

'ಮೇಲು', 'ಕೀಳು' ಈ ಪದಗಳು ಶ್ಲೇಷೆಯಿಂದ ಭಾವದರ್ಶಕವೂ, ಸ್ಥಾನ ದರ್ಶಕವೂ ಆಗಿ ಈ ವಚನದ ಸೊಗಸನ್ನು ಹೆಚ್ಚಿಸಿವೆ. ಹಸುವಿನ ಹಾಲು ಕರೆಯುವವರು ಕೆಳಗೆ ಕೂಡಬೇಕಾಗುತ್ತದೆ. 'ಕೀಳ್' ಶಬ್ದಕ್ಕೆ ಕರುವೆಂಬ ಅರ್ಥವೂ ಇದೆ. ಹಸು-ಕರುವಿನ ಪ್ರತಿಮೆ ಗುರು-ಶಿಷ್ಯರ, ದೇವ-ಭಕ್ತರ ಸಂಬಂಧವನ್ನು ಚೇತೋಹಾರಿಯಾಗಿ ಸೂಚಿಸಿದೆ. 'ಮಹಾದಾನಿ' ಎಂಬ ವಿಶೇಷಣ ಇಲ್ಲಿ ಅರ್ಥಪೂರ್ಣವಾಗಿದೆ.

ಹೊಗಳಿಕೆಯೆಂಬುದು 'ಹೊನ್ನಶೂಲ', ಮನ್ನಣೆ ಎಂಬುದು 'ಮಸೆದಲಗು' ಬಸವಣ್ಣನವರಿಗೆ, ಎಲ್ಲಾ ಒಡೆಯರು ಏರಿಸಿ ನುಡಿದರೆ 'ನಾನೇನು ಪಾಪ ಮಾಡಿದೆನೋ' 'ಬೆಳೆಯದ ಮುನ್ನವೇ ಕೊಯ್ವರೇ?' ಎಂದು ಅವರ ಹೃದಯ ತಳಮಳಿಸುತ್ತದೆ. ದೇವನು ಜಂಗಮ ರೂಪದಲ್ಲಿ ಭಕ್ತನ ಬಳಿಗೆ ಬರುವುದರಿಂದ 'ಎಂದೆಂದೂ ಮಂಚವನೇರದ ಭಾಷೆ'ಯನ್ನು ಅವರು ಹೊಂದಿದ್ದಾರೆ. ಯಾಕೆಂದರೆ 'ಆಳ್ದನು ಬರಲು ಆಳು ಮಂಚದ ಮೇಲಿಪ್ಪುದು ಗುಣವೇ?' ಎಂದು ಅವರ ಭಾವನೆ.

**ಬಸವಣ್ಣನವರ ಜಂಗಮಭಕ್ತಿ ಈ ವಚನದಲ್ಲಿ ಕೆನೆಗಟ್ಟಿ ನಿಂತಿದೆ:**
**ಭಿತ್ತಿಯಿಲ್ಲದೆ, ಬರೆಯಬಹುದೇ ಚಿತ್ತಾರವ ?**
**ಬಿತ್ತಿ ಬೆಳೆಯಬಹುದೇ ಧರೆಯಿಲ್ಲದೆ ?**

ಎಂಥ ಉತ್ತಮ ಚಿತ್ರವನ್ನು ಬರೆಯಬೇಕಾದರೂ ಗೋಡೆಯ ಆಧಾರ ಬೇಕು. ಬಿತ್ತಿ ಬೆಳೆಯಲು ಭೂಮಿಯ ಆಧಾರಬೇಕು. 'ಭಿತ್ತಿ' 'ಬಿತ್ತಿ' ಪದಗಳ ಸಹಜ ಸಂಯೋಜನೆ ಹಾಗೂ ಪದಗಳ ಮೇಲೆ ಬೀಳುವ 'ಒತ್ತು' ಭಾವದ ಒತ್ತಡಕ್ಕೆ ಸಾಫಲ್ಯವನ್ನೊದಗಿಸಿವೆ. 'ಸ್ಥಾವರ-ಜಂಗಮ' ಭಾವವನ್ನು ಸುಂದರವಾಗಿ ರೂಪಿಸುವ ಈ ವಚನ ನೋಡಿ:

**ಸ್ಥಾವರಭಕ್ತಂಗೆ ಸೀಮೆಯಲ್ಲದೆ**
**ಘನಲಿಂಗ ಜಂಗಮಕ್ಕೆ ಸೀಮೆಯೆಲ್ಲಿಯದು ?**
**ಅಂಬುಧಿಗೆ ಸೀಮೆಯಲ್ಲದೆ**
**ಹರಿವ ನದಿಗೆ ಸೀಮೆಯೆಲ್ಲಿಯದು ?**

ಘನಲಿಂಗವೇ ಜಂಗಮವಾಗಿ ಜಗತ್ತನ್ನು ವ್ಯಾಪಿಸಿಕೊಂಡಿದೆ. ಜಂಗಮ ಭಕ್ತನನ್ನರಸಿಕೊಂಡು ನದಿಯಂತೆ ಧಾವಿಸಿಬರುತ್ತಾನೆ. ಅವರ ಸಂಗಮವೇ ಜೀವನದ ಧ್ಯೇಯವೆಂಬುದನ್ನು ಈ ವಚನ ಹೃದಯಂಗಮವಾಗಿ ಅಭಿವ್ಯಕ್ತಿಗೊಳಿಸಿದೆ.

ಶರಣರ ಮನಸ್ಸು ಲೋಕದ ಎಲ್ಲ ವಸ್ತುಗಳಿಗಿಂತಲೂ ಘನವಾದುದು. ಏಕೆಂದರೆ ಅಲ್ಲಿ ಈಶ್ವರನು ವಾಸಿಸಿದ್ದಾನೆ. ಈ ವಿಚಾರವನ್ನು ತರ್ಕಪೂರ್ಣವಾಗಿ ಸರಪಣಿಯಂತಿರುವ ಸಾರಾಲಂಕಾರದ ಸೊಗಸಿನಿಂದ ಒಡಪು ಒಡೆದಂತೆ ಬಿಡಿಸುತ್ತದೆ ಮುಂದಿನ ವಚನ:

**ಸಮುದ್ರ ಘನವೆಂಬೆನೆ? ಧರೆಯ ಮೇಲಡಗಿತ್ತು.**
**ಧರೆ ಘನವೆಂಬೆನೆ ? ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು.**
**ನಾಗೇಂದ್ರನ ಘನವೆಂಬೆನೆ ?**
**ಪಾರ್ವತಿಯ ಕಿರುಕುಣಿಕೆಯ ಮುದ್ರಿಕೆಯಾಗಿತ್ತು.**
**ಅಂತಹ ಪಾರ್ವತಿ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿಯಾದಳು.**
**ಅಂತಹ ಪರಮೇಶ್ವರನ ಘನವೆಂಬೆನೆ?**
**ನಮ್ಮ ಕೂಡಲಸಂಗನ ಶರಣರ**
**ಮನದ ಕೊನೆಯ ಮೊನೆಯ ಮೇಲಡಗಿದನು!**

ಗಂಡನ ಮೇಲೆ ಸ್ನೇಹವಿಲ್ಲದ, ಅಧರ್ಮದಲ್ಲಿ ನಡೆಯುವ 'ಮಾನಿಸಗಳ್ಳಿ'ಯ ಮಾನಭಂಗದ ಚಿತ್ರವನ್ನು ನೋಡಿ:

**ಹಾದರಕ್ಕೆ ಹೋದರೆ ಕಳ್ಳದಮ್ಮವಾಯಿತ್ತು;**
**ಹಾಳುಗೋಡೆಗೆ ಹೋದರೆ ಚೇಳೂರಿತ್ತು;**
**ಅಬ್ಬರವ ಕೇಳಿ ತಳವಾರನುಟ್ಟ ಸೀರೆಯ ಸುಲಿದ;**
**ನಾಚಿ ಹೋದರೆ ಮನೆಯ ಗಂಡ ಬೆನ್ನ ಬಾರನ್ನೆತ್ತಿದ;**
**ಅರಸು ಕೂಡಲಸಂಗಮದೇವ ದಂಡವ ಕೊಂಡ!**

ಲಿಂಗಪಥವನ್ನು ತಪ್ಪಿ ಅಧರ್ಮದಲ್ಲಿ ನಡೆಯುವವರ ಗತಿ ಹೀಗೆಯೇ ಎಂಬ ಭಾವವನ್ನು ಆ ಕಾಲದಲ್ಲಿ ಪ್ರಚಲಿತವಿರಬಹುದಾದ ಜಾನಪದ ಕಥೆಯೊಂದರ ಪೂರ್ಣ ದೃಷ್ಟಾಂತದಿಂದ ಈ ವಚನದಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.

ಉಪಮೆ ದೃಷ್ಟಾಂತಗಳಂತೆಯೇ ಬಸವಣ್ಣನವರ ರೂಪಕ ನಿರ್ಮಾಣಶಕ್ತಿಯೂ ಆಗಾಧವಾದುದು. ಅವರ ಅನುಭವದ ತೀವ್ರತೆಯನ್ನೂ ಕಾವ್ಯಪ್ರತಿಭೆಯನ್ನೂ ಇಂಥ ಕೆಲವು ಪೂರ್ಣರೂಪಗಳು ಸಮರ್ಥವಾಗಿ ಹೊರಹೊಮ್ಮಿಸುತ್ತವೆ. ಭಾವಕ್ಕೆ ತಕ್ಕ ಭಾಷೆಯನ್ನು ಅವರು ಹೇಗೆ ಹದಗೊಳಿಸಿದರೆಂಬುದನ್ನು ಇಲ್ಲಿಯೂ ಮನಗಾಣಬಹುದು:

**ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ;**
**ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ!**
**ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಹುಮಾಡಿ**
**ನೀವಿರಿಸಿದಿರಿ, ಕೂಡಲಸಂಗಮದೇವಾ.**

ನೋಡಲು ಕೆಂಪಗೆ, ಮಿದುವಾಗಿ, ಮಾಟವಾಗಿರುವ ಅತ್ತಿಯ ಹಣ್ಣು 'ಚಿತ್ತ'ಕ್ಕೆ ತಕ್ಕ ರೂಪಕ. ಅದನ್ನು ಒಡೆದು ನೋಡಿದಾಗ ಅದರಲ್ಲೇನೂ ಹುರುಳಿಲ್ಲವೆಂಬುದು ಗೊತ್ತಾಗುತ್ತದೆ. ಇಷ್ಟೇ ಅಲ್ಲ, ಅದು ಹುಳುಗಳಿಗೆ ಆಗರವಾಗಿರುವುದನ್ನೂ ನೋಡುತ್ತೇವೆ. ಡಾಂಭಿಕತನದಿಂದ ಕೂಡಿದ ಈ ಪ್ರಪಂಚದಲ್ಲಿ ತಮ್ಮನ್ನೂ ಈ ಅತ್ತಿಯ ಹಣ್ಣಿನಂತೆ ಒಂದು 'ರೂಹು' ಮಾಡಿ (ಗುಣವಿಲ್ಲದೆ) ಇರಿಸಲಾಗಿದೆ ಎಂಬ ಮನೋವಿಶ್ಲೇಷಣೆ ಕೆಲವೇ ಶಬ್ದಗಳಲ್ಲಿ ಇಲ್ಲಿ ಮೂರ್ತೀಭವಿಸಿದೆ.

ಈ ಚಿತ್ತ ಸ್ವಭಾವತಃ ಚಂಚಲ; ಅಲ್ಲದೆ ಕಣ್ಣ ಮುಂದೆ ವಿಷಯವಾಸನೆಯಿಂದ ಜಗ್ಗುವ ಅನೇಕ ವಸ್ತುಗಳಿವೆ. ಅದರದೇನು ತಪ್ಪು? ಮೇಲುನೋಟಕ್ಕೆ ಅದು ತನಗೆ ಹಿತವೆಂದೇ ಭಾವಿಸುತ್ತದೆ.

**ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ;**
**ಪಶುವೇನು ಬಲ್ಲುದು? ಹಸುರೆಂದೆಳೆಸುವುದು.**
**ವಿಷಯರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ**
**ಸುಬುದ್ಧಿಯೆಂಬುದಕವನೆರೆದು,**
**ನೋಡಿ ಸಲಹಯ್ಯಾ ಕೂಡಲಸಂಗಮದೇವಾ.**

ಜನಜೀವನಕ್ಕೆ ಪರಿಚಿತವಾದ ಸಂಗತಿಯನ್ನೆತ್ತಿಕೊಂಡು ಅದಕ್ಕೆ ಕಾವ್ಯದ ರೂಪವನ್ನು ನೀಡಿ ಅನುಭವವನ್ನು ಭಟ್ಟಿ ಇಳಿಸುವ ಬಸವಣ್ಣನವರ ರೀತಿ ಇದು. ಅರಲಿನ ಮುದ್ದೆಯಿಂದ ಕುಂಬಾರನು ನೋಡುನೋಡುತ್ತಾ ಗಡಿಗೆ ಮಡಿಕೆಗಳನ್ನಾಗಿ ರೂಪುಗೊಳಿಸುವಂತೆ ನಿತ್ಯಜೀವನದ ಸಾಮಾನ್ಯ ಘಟನೆ ಇವರ ಪ್ರತಿಭೆಯಲ್ಲಿ ಆಕಾರ ಪಡೆದು ಹೊರಬರುತ್ತದೆ.

ವಿಷಯವೆಂಬ ಹಸುರು ಕಣ್ಣಮುಂದೆ ಹರಡಿದೆ. ಮುಗ್ಧವಾದ ಹಸು ಏನೂ ವಿಚಾರ ಮಾಡದೆ ಅದನ್ನು ಗಪಗಪ ತಿನ್ನುತ್ತದೆ. (ಹಸುವಿನಲ್ಲಿಯೂ ಕೆಲವೊಂದು ಜಾತಿಯ ಹುಲ್ಲು ಹಸುವಿನ ಹೊಟ್ಟೆಗೆ ಆರೋಗ್ಯಕರವಲ್ಲ.) ಜೀವದ ಮುಗ್ಧತೆ, ಅಸಹಾಯಕತೆ, ವಾಸನಾಬಲ–ಇವೆಲ್ಲವನ್ನೂ ಎರಡನೆಯ ಸಾಲು ಸಹಜವಾಗಿ ಹೊಮ್ಮಿಸುತ್ತದೆ. ಹಸುವನ್ನು ಸಾಕಿದಾಗ ಅದಕ್ಕೆ ತಕ್ಕ ಮೇವು, ನೀರು ಕೊಟ್ಟು ಸಲಹಬೇಕು. ಮುಂದಿನ ಸಾಲುಗಳಲ್ಲಿ 'ಹಸು' ಭಕ್ತ ಜೀವವಾಗಿ ಮಾರ್ಪಟ್ಟು ಭಕ್ತಿರಸವನ್ನು, ಸುಬುದ್ಧಿ ಎಂಬ ನೀರನ್ನು ಬಯಸಿ ಮೊರೆಯಿಡುತ್ತದೆ.

ಇಡಿಯ ವಚನದ ತುಂಬ 'ಸ'ಕಾರದ ಅನುಪ್ರಾಸ ಸಂಪದ್ಯುಕ್ತವಾಗಿ ಭಾವವನ್ನು ಸೂಸಿ ಸೂಸಿ ಹೊರಹೊಮ್ಮಿಸುವ ರೀತಿ ಅನ್ಯಾದೃಶವಾದುದು. ಮೊದಲ ಸಾಲಿನಲ್ಲಿಯ 'ಪಸರಿಸಿದೆಯಯ್ಯಾ' ಎಂಬ ಪದವಂತೂ ಹುಲ್ಲನ್ನು ಹಸುವಿನ ಮುಂದೆ ತಂದು ಕೊಡವಿ ಚೆಲ್ಲುವ ಕ್ರಿಯೆಯನ್ನು ಅಭಿನಯಿಸಿ ತೋರಿಸುತ್ತದೆ. 'ಪಶುವೇನು ಬಲ್ಲುದು? ಹಸುರೆಂದೆಳಸುವುದು' ಎಂಬಲ್ಲಿಯ ಆಡುಮಾತಿನ ಲಯ ತುಂಬಾ ಸೊಗಸಾಗಿದೆ. ಮುಂದಿನ ಮೂರು ಸಾಲುಗಳಲ್ಲಿಯ 'ಮಾಡಿ', 'ಮೇಯಿಸಿ', 'ನೋಡಿ' ಎನ್ನುವಲ್ಲಿಯ ಸಲಿಗೆಯ ಬಿನ್ನಹ ಮೊದಲ ಎರಡು ಸಾಲುಗಳಲ್ಲಿಯ ಆರೋಪ ಭಾವದ ಪರಿವರ್ತನೆಯನ್ನು ಸುಂದರವಾಗಿ ಸೂಚಿಸುತ್ತದೆ. 'ನೋಡಿ ಸಲಹಯ್ಯ' ಎನ್ನುವ ನುಡಿಕಟ್ಟಿನಲ್ಲಿರುವ 'ಕಾಕು' ಇಡಿಯ ವಚನದ ಭಾವ ಅರ್ಥಭಾರದಿಂದ ಬಳುಕುವಂತೆ ಮಾಡುತ್ತದೆ. ಇಂಥ ವಚನಗಳಲ್ಲಿ ಬಸವಣ್ಣನವರ ಕಾವ್ಯಶಕ್ತಿಯ ಪರಿಪೂರ್ಣ ಸಿದ್ಧಿಯನ್ನು ಕಾಣುತ್ತೇವೆ.

ಈ ಪಶುವಿನ ರೂಪಕ ಹೀಗೆಯೇ ಇನ್ನೂ ನಾಲ್ಕೈದು ವಚನಗಳಲ್ಲಿ ಬೇರೆ ಬೇರೆ ಭಾವಗಳನ್ನು ಪ್ರಕಟಪಡಿಸಿ ಕೃತಕೃತ್ಯವಾಗಿದೆ. ಅವುಗಳಲ್ಲಿ ಒಂದು ವಚನ ಪಡೆದಿರುವ ಸಾರ್ಥಕತೆಯನ್ನು ಪರಿಶೀಲಿಸದೆ ಮುಂದುವರೆಯುವಂತಿಲ್ಲ.

**ಬಡಪಸು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ**
**ಬೇರೆ ಗತಿಯುಂಟೆ?**
**ಶಿವ ಶಿವಾ! ಹೋದಹೆ ಹೋದಹೆನಯ್ಯಾ**
**ಪಶು ನಾನು; ಪಶುಪತಿ ನೀನು !**
**ತುಡುಗುಣಿಯೆಂದು ಎನ್ನ ಹಿಡಿದು, ಬಡಿಯದ ಮುನ್ನ**
**ಒಡೆಯ ನಿಮ್ಮ ಬಯ್ಯದಂತೆ ಮಾಡು,**
**ಕೂಡಲಸಂಗಮದೇವಾ.**

ಒಂದು ಮಾತು ಹುಸಿ ಹೋಗದಂತೆ ವಚನದ ಕಾವ್ಯಾರ್ಥವನ್ನು ಮಿಡಿಯುತ್ತಾ ಹೋಗುತ್ತವೆ ಇಲ್ಲಿ ಪ್ರತಿಯೊಂದು ಪದ. ಕೆಸರಿನಲ್ಲಿ ಬಿದ್ದು ಕಂಗಾಲಾಗಿ ಕಾಲು ಬಡಿಯುತ್ತಾ ನಿಸ್ಸಹಾಯಕವಾಗಿ ನಿಂತಿರುವ ಪಶುವಿನ ಚಿತ್ರ ಮೊದಲೆರಡು ಸಾಲುಗಳಲ್ಲಿ ಮೂಡಿದೆ. 'ಶಿವಶಿವಾ'! ಹೋದಹೆ ಹೋದಹೆನಯ್ಯಾ!' ಎಂಬ ಆರ್ತನಾದ ಆ ಪಶು ಮೇಲೆದ್ದು ಬರುವ ಶಕ್ತಿ ಇಲ್ಲದೆ ಇನ್ನಷ್ಟು ಕೆಳಗೆ ಕುಸಿಯುತ್ತಿರುವ ಕರುಣಾಜನಕ ಸ್ಥಿತಿಯನ್ನು ತೀವ್ರಗೊಳಿಸಿ ತೋರಿಸುತ್ತದೆ. 'ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ' ಎಂಬ ಪ್ರಾರ್ಥನೆ ಅರ್ಥಪೂರ್ಣವಾಗಿದೆ. ಆ ಪಶುವನ್ನು ಬರಿಯ ಮೇಲೆತ್ತುವದಿಷ್ಟೇ ಅಲ್ಲ– ಹಾಗಾದರೆ ಅದು ಮತ್ತೆ ಕೆಸರಿಗೆ ಬೀಳಬಹುದು. ಸಂಗಮದೇವನ ಮನದತ್ತ ಎತ್ತಿ ತೆಗೆದುಕೊಳ್ಳುವ ಕಾರ್ಯ ಈಗ ನಡೆಯಬೇಕಾಗಿದೆ. 'ಪಶುಪತಿ' ಪದದಲ್ಲಿಯ ದ್ವಂದ್ವಾರ್ಥ ಬಸವಣ್ಣನವರ ಭಾವ ತಾದಾತ್ಮ್ಯಕ್ಕೆ ಸಾಕ್ಷಿ. 'ತುಡುಗುಣಿ' ಎಂದು ಹಿಡಿದು ಬಡಿದರೆ ಸಾಕಿದವನಿಗೇ ಅವಮಾನವಲ್ಲವೇ? ಕೊನೆಯ ಸಾಲುಗಲ್ಲಿಯ ವಿಚಾರದ ಚಮತ್ಕಾರ ಅಚ್ಚರಿಗೊಳಿಸುತ್ತದೆ. ಸಾಕಿದವನು ಸರಿಯಾಗಿ ನೋಡಿಕೊಳ್ಳದಿದ್ದರಿಂದ ಅದು ತುಡುಗು ಮೇಯತೊಡಗಿತು. ವಚನದ ಪ್ರಾರಂಭದಲ್ಲಿಯೇ ಬರುವ 'ಬಡಪಸು' ಎಂಬ ಪದದ ಸಾರ್ಥಕ್ಯವನ್ನು ಇಲ್ಲಿ ಗಮನಿಸಬೇಕು. ಅಲ್ಲದೆ ಕೊನೆಯ ಮೂರು ಸಾಲುಗಳಲ್ಲಿಯ ಪದಗಳಲ್ಲಿ ಬಳಕೆಗೊಂಡ 'ಡ'ಕಾರ ಪ್ರಾಸ ಹಿಡಿದು ಬಡಿಯುವ ಕ್ರಿಯೆಯನ್ನೂ ಅದರಿಂದ ಬಿಡಿಸಿಕೊಳ್ಳಬೇಕೆಂಬ ಭಾವವನ್ನೂ ತಡಯಿಲ್ಲದೆ ಒಡಮೂಡಿಸುತ್ತದೆ. 'ಒಡೆಯ ನಿಮ್ಮ ಬಯ್ಯದಂತೆ ಮಾಡು'– ಈ ವಾಕ್ಯದಲ್ಲಿ 'ಒಡೆಯ' ಶಬ್ದದ ಮುಂದೆ ಸಹಜವಾಗಿ ಬರುವ ತಡೆ (pause) ಅದಕ್ಕೆ ನಾಟಕೀಯತೆಯ ಸೊಬಗನ್ನು ತಂದುಕೊಟ್ಟಿದೆ. ಹೀಗೆ ಕಿರಿದರಲ್ಲಿಯೇ ಅನೇಕ ಕಾವ್ಯಾಂಶಗಳನ್ನು ಹೊರಹೊಮ್ಮಿಸುವ ಧನ್ಯತೆಯನ್ನು ಪಡೆದಿದೆ ಈ ವಚನ.

'ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲುಹು' ಎಂದೂ 'ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ 'ಶಿವ ಶಿವಾ' ಎಂದೋದಿಸಯ್ಯಾ' ಎಂದೂ ಬಸವಣ್ಣನವರ ಹೃದಯ ಮೊರೆಯಿಟ್ಟಿದೆ. ಅವರ ಆತ್ಮಶುದ್ಧಿಯ ಹಂಬಲ ರೂಪಕಗಳಲ್ಲಿ ಅನೇಕ ಬಗೆಯಾಗಿ ಅಭಿವ್ಯಕ್ತಿಗೊಂಡಿದೆ.

**ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ?**
**ಒರೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ;**
**ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ**

**ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು**
**ಕೂಡಲಸಂಗಮದೇವಾ.**

ಬಂಗಾರವನ್ನು ಕರಗಿಸಿ ಕಶ್ಮಲವನ್ನು ಕಳೆದು, ಪುಟಕ್ಕಿಟ್ಟು, ಒರೆದು ನೋಡಿ, ಕಡಿದು ಬಡಿದು ತೊಡಿಗೆಯ ಮಾಡುವ ಕ್ರಿಯೆ ಇಲ್ಲಿ ಕಣ್ಮುಂದೆ ಕಟ್ಟುತ್ತದೆ. ಅದನ್ನು ಶರಣರ ಪಾದಕ್ಕೆ ತೊಡಿಗೆಯ ಮಾಡಬೇಕೆಂಬ ಹಂಬಲ ಇಡೀ ಮನವನ್ನೇ ಶುದ್ಧಿಗೊಳಿಸಿ ಸಂಗಮದೇವನ ಪಾದಕ್ಕೊಪ್ಪಿಸುವ ಕಿಂಕರಭಾವದ ತಲ್ಲೀನತೆಯಲ್ಲಿ ಅಚ್ಚಳಿಯದಂತೆ ಮಾಡಿದೆ. (ಇಲ್ಲಿ ಬರುವ ಅನೇಕ ಕ್ರಿಯೆಗಳ ಸಮಾರೋಪವು ಲಾಕ್ಷಣಿಕರ ಪರಿಭಾಷೆಯಲ್ಲಿ 'ಸಮಾಸೋಕ್ತಿ' ಅಲಂಕಾರವೆನಿಸುತ್ತದೆ.)

ಈ ಸರ್ವಸಮರ್ಪಣ ಭಾವದ ತೀವ್ರತೆಯನ್ನು ಅವರ ಇನ್ನೊಂದು ವಚನ ಶ್ರೀಮಂತವಾಗಿ ಹಿಡಿದಿಟ್ಟಿದೆ :

**ಎನ್ನ ಕಾಯವ ದಂಡಿಗೆಯ ಮಾಡಯ್ಯ**
**ಎನ್ನ ಸಿರವ ಸೋರೆಯ ಮಾಡಯ್ಯ**
**ಎನ್ನ ನರವ ತಂತಿಯ ಮಾಡಯ್ಯ**
**ಎನ್ನ ಬೆರಳ ಕಡ್ಡಿಯ ಮಾಡಯ್ಯ**
**ಬತ್ತೀಸ ರಾಗವ ಹಾಡಯ್ಯಾ; ಉರದಲೊತ್ತಿ ಬಾರಿಸು,**
**ಕೂಡಲಸಂಗಮದೇವಾ.**

ತಮ್ಮ ದೇಹವನ್ನೇ ಕೊಳಲು ಮಾಡಿ ಮಧುರ ರಾಗವನ್ನು ಹೊರಡಿಸುವಂತೆ ದೇವರನ್ನು ಕೇಳಿಕೊಂಡ ಭಕ್ತ ಕವಿಗಳುಂಟು.[೧] ಬಸವಣ್ಣನವರು ತಮ್ಮನ್ನು ವೀಣೆಯನ್ನಾಗಿ ಸಮರ್ಪಿಸಿಕೊಳ್ಳುವ ಈ ರೂಪಕ ಔಚಿತ್ಯಪೂರ್ಣವಾಗಿದ್ದು ಇಲ್ಲಿಯ ಭಾವವೂ ರಕ್ತ ಮಾಂಸದಿಂದ ಕೊಡಿಕೊಂಡು ಜೀವಂತವಾಗಿ ಸಾಲು ಸಾಲಿಗೂ ಜೀವನಾದವನ್ನು ಮಿಡಿಯುತ್ತದೆ; ದೇಹದ ಒಂದೊಂದು ಅವಯವವು ವೀಣೆಯ ಬೇರೆ ಬೇರೆ ಭಾಗಗಳಿಗೆ ಸಮನ್ವಯಗೊಳ್ಳುವ ಸಮಸ್ತ ವಸ್ತು ವಿಷಯ ರೂಪಕ ಬರಿಯ ಕೊಳಲಿನ ಸಾಮ್ಯಕ್ಕಿಂತ ಹೆಚ್ಚಿನ ಸಾರ್ಥಕ್ಯವನ್ನು ಪಡೆದಿದೆ. ಶಿರವನ್ನು ಸೋರೆಯಾಗಿಸಿ, ನರಗಳನ್ನೇ ತಂತಿಗಳನ್ನಾಗಿಸಿ ಬೆರಳನ್ನು ಕಡ್ಡಿಮಾಡಿ ಎದೆಗೊತ್ತಿ ಬಾರಿಸುತ್ತ ಸಂಗಮದೇವ ಬತ್ತೀಸರಾಗಗಳನ್ನು ಹಾಡಬೇಕು. ಆ ಎಲ್ಲ ರಾಗಗಳನ್ನು ಈ ವೀಣೆ ಹೊರಹೊಮ್ಮಿಸಬೇಕು. 'ಉರದಲೊತ್ತಿ ಬಾರಿಸು' ಎನ್ನುವಲ್ಲಿಯ

೧. "Only let me make my life simple and straight like a flute of reed to fill with music"-Rabindranath Tagore, 'Gitanjali'-7

ಅವಧಾರಣೆ ಗಮನಾರ್ಹ. ಸಂಗಮದೇವ ಈ ವೀಣೆಯನ್ನೂ ಎದೆಗವಚಿಕೊಂಡು, ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಸಮರ್ಪಣಭಾವ ಇಲ್ಲಿಯ ಪ್ರತಿಯೊಂದು ವಿವರದಲ್ಲಿಯೂ ಸಜೀವವಾಗಿ ಅಭಿವ್ಯಕ್ತಗೊಂಡಿದೆ. ಮತ್ತೊಂದು ವಚನದಲ್ಲಿ ದೇಹವೇ ದೇಗುಲವಾಗಿ ಮೆರೆದಿದೆ:

**ಉಳ್ಳವರು ಶಿವಾಲಯವ ಮಾಡುವರು:**
**ನಾನೇನ ಮಾಡುವೆ ? ಬಡವನಯ್ಯಾ**
**ಎನ್ನ ಕಾಲೇ ಕಂಭ, ದೇಹವೇ ದೇಗುಲ,**
**ಸಿರ ಹೊನ್ನ ಕಳಸವಯ್ಯಾ.**
**ಕೂಡಲಸಂಗಮದೇವಾ ಕೇಳಯ್ಯಾ;**
**ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ!**

ಕಾಲೇ ಕಂಭವಾಗಿ, ದೇಹವೇ ದೇಗುಲವಾಗಿ, ಶಿರವೇ ಹೊನ್ನ ಕಳಸವಾಗಿರುವ ಜಂಗಮ ತತ್ತ್ವ ಮತ್ತು ಶರಣಭಾವದ ಅತ್ಯುನ್ನತ ಆದರ್ಶವನ್ನು ಕಣ್ಣೆದುರಿಗೆ ಕಡೆದು ನಿಲ್ಲಿಸುತ್ತದೆ ಈ ವಚನ. ದುಡ್ಡಿದ್ದವರು ದೇವಾಲಯವನ್ನು ಕಟ್ಟಿಸಬಹುದು; ಆದರೆ ಅದು ಎಷ್ಟೇ ಆದರೂ ಸ್ಥಾವರ; ಅದಕ್ಕೆ ಅಳಿವುಂಟು. ಈ ಜಂಗಮ ದೇವಸ್ಥಾನಕ್ಕೆ ಅಳಿವಿಲ್ಲ. 'ಉಳ್ಳವ' 'ಬಡವ' ಎಂಬ ಅಚ್ಚಗನ್ನಡ ಪದಗಳು 'ಕಂಭ', 'ದೇಗುಲ', 'ಸಿರ', 'ಕಳಸ' ಈ ತದ್ಭವ ರೂಪಗಳು, 'ಸ್ಥಾವರ', 'ಜಂಗಮ' ಎಂಬ ಸಂಸ್ಕೃತ ಪದಗಳು– ಇದೆಲ್ಲವನ್ನು ಈ ವಚನದಲ್ಲಿ ಸಹಜತೆ ಕಡೆದಂತೆ ಅರ್ಥವತ್ತಾಗಿ, ಹದವರಿತು ಬಳಸಿರುವ ರೀತಿ ಬಸವಣ್ಣನವರ ಸಮುಚಿತಶೈಲಿಗೆ ಒಳ್ಳೆಯ ನಿದರ್ಶನವಾಗಿದೆ.

ಸತಿಪತಿ ಭಾವದ ಸುಂದರ ಸಮನ್ವಯವಿದು :

**ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ;**
**ನಮ್ಮ ನಲ್ಲ ಸುಳಿಯಲಿಲ್ಲ; ಸುಳಿದು ಸಿಂಗಾರವ ಮಾಡಲಿಲ್ಲ!**
**ಕೂಡಲಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ.**

(ಬ.ಷ.ವ.)

ಹೆಣ್ಣುಮಕ್ಕಳು ಪರಸ್ಪರ ಮಾತನಾಡಿಕೊಳ್ಳುವ ರೀತಿ ಇಲ್ಲಿ ಎಷ್ಟು ಸೊಗಸಾಗಿ ಮೂಡಿದೆ! ಲಿಂಗಪತಿ ಶರಣಸತಿಯನ್ನು ಆಗಲೆ ತನ್ನೊಳಗೆ ಹುದುಗಿಸಿಕೊಂಡು ಬಿಟ್ಟಿದ್ದಾನೆ. ತನ್ನನ್ನು ಒಲಿಸಲು ಸುಳಿದಾಡುವ, ಸಿಂಗಾರ ಮಾಡಿಕೊಳ್ಳುವ ಅಗತ್ಯವೇ ಉಳಿದಿಲ್ಲ ಎಂಬ ಭಾವಕ್ಕೆ ಇಲ್ಲಿ ಸಹಜವಾದ ಮುಕ್ತಿ ದೊರಕಿದೆ.

**ಮನೆಯ ಗಂಡನ ಮನೆವಾರ್ತೆಯನೇನ ಹೇಳುವೆನವ್ವಾ!**
**ಅಂಗ ವಿದ್ಯೆಯನೊಲ್ಲ**
**ಕಣ್ಣೊಳಗಣ ಕಸವ ಕಳೆದಲ್ಲದೆ ನೋಡಲೀಯ;**
**ಕೈಯ ತೊಳೆದಲ್ಲದೆ ಮುಟ್ಟಲೀಯ;**
**ಕಾಲ ತೊಳೆದಲ್ಲದೆ ಹೊದ್ದಲೀಯ!**
**ಇಂತೀ ಸರ್ವಾಂಗ ತಲೆದೊಳೆದ ಕಾರಣ**
**ಕೂಡಲಸಂಗಮದೇವನೆನ್ನ ಕೂಡಿಕೊಂಡನವ್ವಾ!**

'ಅರಿಶಿಣವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತೆ' ಇದ್ದ ಸ್ಥಿತಿಯೊಂದಿತ್ತು. ಆದರೆ ಈಗ ಆ ಉದ್ವೇಗವಿಲ್ಲ. ಅಂತರಂಗದ ನಿಸ್ತರಂಗ ಕೊಳದಲ್ಲಿ ಸಂಗಮದೇವ ಅಚ್ಚಳಿಯದೆ ಮೂಡಿದ್ದಾನೆ. ಇದು ಸುಮ್ಮನೆ ಸಿದ್ಧಿಸಲಿಲ್ಲ. ಅಂಗಾಂಗಗಳೆಲ್ಲವನ್ನೂ ಪರಿಶುದ್ಧಗೊಳಿಸಿ, ಪ್ರತಿಯೊಂದು ಇಂದ್ರಿಯವನ್ನೂ ಶುಚಿರ್ಭೂತಗೊಳಿಸಿ, ಅಂತರಂಗ ಬಹಿರಂಗ ಒಂದಾಗಿ ಪಾರದರ್ಶಕವಾಗಿ ನಿಂತಾಗ ಇದು ಸಾಧ್ಯವಾಯಿತು. ಓರೆಗಣ್ಣಿನ ನೋಟ, ಕೈಯ ಮಾಟ, ಕಾಲ ಕುಣಿತ ಇತ್ಯಾದಿ ಅಂಗವಿದ್ಯೆಯನ್ನು ಮನವನ್ನೇ ಮನೆ ಮಾಡಿಕೊಂಡಿರುವ ಲಿಂಗಪತಿ ಸೇರುವುದಿಲ್ಲ.

ಭಕ್ತಿ, ಗುರು, ಲಿಂಗ, ಆಚಾರ, ವಿಚಾರ, ಮುಕ್ತಿ–ಇಂಥ ವಿಷಯಗಳನ್ನು ಪ್ರತಿನಿಧಿಸುವಾಗಲೂ ಅದು ಬರಿ ಹೇಳಿಕೆಯಾಗದೆ ಭಾವದ ಪ್ರಣಾಲಿಕೆಯಾಗಿ ರೂಪುಗೊಳ್ಳುತ್ತದೆ ಬಸವಣ್ಣನವರಲ್ಲಿ:

**ಭಕ್ತಿ ಎಂಬ ಪೃಥ್ವಿಯ ಮೇಲೆ**
**ಗುರುವೆಂಬ ಬೀಜವಂಕುರಿಸಿ**
**ಲಿಂಗವೆಂಬ ಎಲೆಯಾಯಿತ್ತು.**
**ಲಿಂಗವೆಂಬ ಎಲೆಯ ಮೇಲೆ**
**ವಿಚಾರವೆಂಬ ಹೂವಾಯಿತ್ತು.**
**ಆಚಾರವೆಂಬ ಕಾಯಾಯಿತ್ತು.**
**ನಿಷ್ಪತ್ತಿಯೆಂಬ ಹಣ್ಣಾಯಿತ್ತು.**
**ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ**
**ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.**

ಗುರು ಎಂಬ ಬೀಜಕ್ಕೆ ಭಕ್ತಿಯೆಂಬ ಪೃಥ್ವಿಯೇ ಆಧಾರ. (ಬಸವಣ್ಣನವರು ಭಕ್ತಿಗೆ ಕೊಟ್ಟಿರುವ ಪ್ರಾಮುಖ್ಯಕ್ಕೆ ಈ ರೂಪಕವೇ ಸಾಕ್ಷಿ.) ಆ ಬೀಜ ಅಂಕುರಿಸಿ ಎಲೆಯನ್ನು ನೀಡುವಂತೆ ಗುರು ಭಕ್ತನಿಗೆ ಲಿಂಗವನ್ನು ಈಯುತ್ತಾನೆ. (ಈ ಎಲೆಯ

ಮೂಲಕವೇ ಆ ವೃಕ್ಷ ಉಸಿರಾಡಿಸುವುದು: ಅದು ಪ್ರಾಣಸ್ವರೂಪ). ಆ ಎಲೆಯ ಮೇಲೆ ವಿಚಾರ, ಆತ್ಮದ ಅರಿವು ಹೂವಾಗಿ ಅರಳುತ್ತದೆ. ವಿಚಾರವೆಂಬ ಹೂವು ಆಚಾರಕ್ಕೆಡೆಗೊಟ್ಟು ಕಾಯಾಗುತ್ತದೆ (ಹೂವು ಕಾಯಿ ಹಿಡಿಯದೆ ಹೋದರೆ ಪ್ರಯೋಜನವಿಲ್ಲ. ಅಂತೆಯೇ ವಿಚಾರ ಆಚಾರವಾಗಿ ಪರಿಣಮಿಸಬೇಕು. ಜ್ಞಾನಕ್ರಿಯೆ ಕೂಡಿ ನಡೆಯಬೇಕು) ಆಚಾರವೆಂಬ ಕಾಯಿ ಮಾಗಿ ನಿಷ್ಪತ್ತಿ (ಪರಿಪಾಕ)ಯೆಂಬ ಹಣ್ಣಾಗುತ್ತದೆ. ಇನ್ನೇನು ಈ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುತ್ತದೆ ಎನ್ನುವಷ್ಟರಲ್ಲಿ ದೇವರು ತನಗೆ ಬೇಕೆಂದು ಎತ್ತಿಕೊಳ್ಳುತ್ತಾನಂತೆ. (ಅದು ನೆಲಕ್ಕೆ ಬಿದ್ದು, ಬೀಜವಂಕುರಿಸಿ ಗಿಡವಾಗಿ ಬೆಳೆಯುವ ಪ್ರಮೇಯವಿಲ್ಲ). ನೈಜಭಕ್ತನ ಮೇಲೆ ಭಗವಂತನಿಗಿರುವ ಪ್ರೀತಿ, ಆತ್ಮೀಯತೆ ಅಂತಃಕರಣಗಳನ್ನೆಲ್ಲ ಈ ಮಾತು ಜೀವಂತವಾಗಿ ತುಂಬಿಕೊಂಡಿದೆ. ಈ ಬಗೆಯ ನೈಸರ್ಗಿಕವಾದ ಪರಿಪೂರ್ಣ ಜೀವನವನ್ನು ಸಾಧಿಸಿ ಭಕ್ತ ಭವದಿಂದ ಮುಕ್ತಗೊಳ್ಳುವ ಚಿತ್ರವನ್ನು ಈ ಪೂರ್ಣರೂಪಕ ಪ್ರತಿಬಿಂಬಿಸುತ್ತದೆ.

ಬಸವಣ್ಣನವರು ಇಹಲೋಕದ ಬಾಳನ್ನು ಅಸಡ್ಡೆಯಾಗಿ ಕಂಡವರಲ್ಲ. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು' ಎಂಬ ಅವರ ಮಾತಿನಿಂದ ಇಲ್ಲಿಯ ತುಂಬುಜೀವನಕ್ಕೆ, ಅಚ್ಚ ಬದುಕಿಗೆ ತುಂಬ ಬೆಲೆ ಕೊಟ್ಟಿದ್ದಾರೆ:

**ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ;**
**ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ;**
**ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ,**
**ಕೂಡಲಸಂಗಮದೇವಾ.**

ಮರ್ತ್ಯಲೋಕ ಸೃಷ್ಟಿಕರ್ತನ ಟಂಕಸಾಲೆ; ಇಲ್ಲಿ ಹೊರಬಿದ್ದ ನಾಣ್ಯ 'ಜಣ್' ಎಂದು ನುಡಿಗೊಟ್ಟರೆ ಎಲ್ಲೆಡೆಗೂ ವ್ಯವಹಾರಕ್ಕೆ ಯೋಗ್ಯವಾಗಿ ನಡೆಯಬಲ್ಲುದು. ಇಲ್ಲಿಯೇ ಆ ನಾಣ್ಯ 'ಟೊಕ್' ಎಂದರೆ ಎಲ್ಲಿ ಹೋದರೂ ಖೊಟ್ಟಿಯೇ. ಇಹಜೀವನದ ಮಹತ್ವವನ್ನು ಈ ರೂಪಕ ತೆರೆದು ತೋರಿಸುತ್ತದೆ.

ಬಸವಣ್ಣನವರ ಅನುಭವದ ಅಭಿವ್ಯಕ್ತಿಗೆ ರೂಪಕಗಳಂತೆಯೇ ಪ್ರತೀಕ, ಪ್ರತಿಮೆ, ನುಡಿಚಿತ್ರಗಳೂ ಹದವರಿತು ಒದಗಿಬಂದು ವಚನಗಳ ಕಾವ್ಯಗುಣವನ್ನು ಹೆಚ್ಚಿಸಿವೆ. ಈ ಬಗೆಯ ರೂಪಧಾರಣೆಯಿಂದ ಕವಿಯ ಮೂಲಾನುಭವ ಇನ್ನಿಷ್ಟು ಗಟ್ಟಿಗೊಂಡು ಅದರ ಭಾವಸತ್ಯ ಬಲಗೊಳ್ಳುತ್ತದೆ.[೧]

---

೧. "ಪ್ರತಿಮೆಯೆಂಬುದು ಮೂಲಾನುಭವಕ್ಕೆ 'ನಾವು' ನೀಡುವ ಆಕಾರವಲ್ಲ. ಅದು ಮೂಲಾನುಭವವು ತನಗೆ ಅನಿವಾರ್ಯವೂ ಅವಶ್ಯಕವೂ ಆಗಿರುವ ಸಹಜ ಧರ್ಮದ ಪ್ರೇರಣಶಕ್ತಿಯಿಂದ ಪಡೆಯುವ ರೂಪಧಾರಣೆ. ಅದೊಂದು ಅವತರಣ ಕ್ರಿಯೆ" – ಕುವೆಂಪು 'ತಪೋನಂದನ' ಪುಟ:೩೧(೧೯೫೦)

**ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ ?**
**ಅಘೋರತಪವ ಮಾಡಿದೊಡೇನು ?**
**ಅಂತರಂಗ–ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ**
**ಕೂಡಲಸಂಗಮದೇವ?**

ಅಂತರಂಗ–ಆತ್ಮಶುದ್ಧಿಯಿಲ್ಲದೆ ಎಂಥ ಕಠೋರ ತಪಸ್ಸನ್ನಾಚರಿಸಿದರೇನು? ಮನದಲ್ಲಿ ವಿಕಾರವನ್ನು ಹುದುಗಿಸಿ ಬರೀ ದೇಹದಂಡನೆ ಮಾಡುವುದು ಎಷ್ಟೊಂದು ವ್ಯರ್ಥ ಎಂಬ ಭಾವ 'ಹುತ್ತ' ಹಾಗೂ 'ಹಾವಿ'ನ ಪ್ರತಿಮೆಗಳ ಮೂಲಕ ಅತ್ಯಂತ ಪರಿಣಾಮಕಾರಿಯಾಗಿ ಒಡಮೂಡಿವೆ. ಮೊದಲ ಸಾಲಿನ 'ಹುತ್ತ'ದ ಪ್ರತಿಮೆ ಎರಡನೆಯ ಸಾಲಿನ 'ಅಘೋರ ತಪಸ್ಸಿ'ಗೂ ಸಂಕೇತವಾಗಿ ಬಸವಣ್ಣನವರ ನಿರೂಪಣೆಯ ಸಂಗ್ರಹಶಕ್ತಿಯನ್ನು ವ್ಯಕ್ತಗೊಳಿಸಿದೆ.

ದೇವರು ಕೊಡುವ ಕಾಲಕ್ಕೆ ಕೊಟ್ಟಾನಲ್ಲದೆ ಭಕ್ತ ಬಯಸಿದ ಸಲಕ್ಕೊಮ್ಮೆ ಅವನ ಇಚ್ಛೆಯನ್ನು ಈಡೇರಿಸುತ್ತಾನೆಂದೇನೂ ಇಲ್ಲ.

**ತಾಳಮರಕ್ಕೆ ಕೈಯ ನೀಡಿ**
**ಮೇಲೆ ನೋಡಿ ಗೋಣು ನೊಂದುದಯ್ಯಾ.**

ಯಾವತ್ತೂ ಆಶೆಮಾಡಿಕೊಂಡು ಆಕಾಶದತ್ತ ಮುಖ ಮಾಡಿರುವ ಭಕ್ತನ ಆಯಾಸವನ್ನೂ ನಿಷ್ಫಲತೆಯನ್ನೂ ಎತ್ತರವಾದ ತಾಳೆಮರದ ಬುಡದಲ್ಲಿ ಕೈಯೊಡ್ಡಿ ಆಶೆಯಿಂದ ಗೋಣೆತ್ತಿ ನೋಡುತ್ತಿರುವವನ ದೃಶ್ಯಕ್ಕೆ ಸಮೀಕರಿಸಿ ಮೇಲಿನ ಪ್ರತಿಮೆ ಸಾರ್ಥಕವಾಗಿದೆ.

ಬಸವಣ್ಣನವರ ಆತ್ಮವಿಮರ್ಶೆ ಒಡೆಯನಿಲ್ಲದ 'ಮನೆ'ಯ ಪ್ರತೀಕದಲ್ಲಿ ಚೆನ್ನಾಗಿ ಅಭಿವ್ಯಕ್ತಗೊಂಡಿದೆ:

**ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?**
**ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,**
**ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?**
**ತನುವಿನೊಳಗೆ ಹುಸಿತುಂಬಿ ಮನದೊಳಗೆ ವಿಷಯ ತುಂಬಿ,**
**ಮನೆಯೊಳಗೆ ಮನೆಯೊಡೆಯನಿಲ್ಲಾ,**
**ಕೂಡಲಸಂಗದೇವಾ.**

ಹೊಸ್ತಿಲಲ್ಲಿ ಹುಲ್ಲು ಬೆಳೆದ, ಒಳಗೆಲ್ಲ ಧೂಳು ಕಸ ತುಂಬಿದ ಮನೆಯ ಪ್ರತೀಕವನ್ನು ಕಣ್ಣೆದುರು ನಿಲ್ಲಿಸಲಾಗಿದೆ. ಹೀಗೆ ಹಾಳು ಸುರಿಯುತ್ತಿರುವ ಈ

ಮನೆಯಲ್ಲಿ ಮನೆಯೊಡೆಯನಿದ್ದಾನೋ ಇಲ್ಲವೋ ಎಂಬ ಸಂಶಯ ಬರುವುದು ಸಹಜ. ಆದರೆ ಆ ಸಂಶಯ ತನ್ನನ್ನೇ ತಾನು ನೋಡಿಕೊಂಡಾಗ ದೃಢಗೊಳ್ಳುತ್ತದೆ. ಮೊದಲ ಪ್ರತೀಕದ ಮನೆ ತನುವಾಗಿ ಅಲ್ಲಿಯ 'ರಜ' ಇಲ್ಲಿಯ 'ಹುಸಿ'ಯಾಗಿ 'ಹೊಸ್ತಿಲದ ಹುಲ್ಲು' ಮನದೊಳಗಿನ 'ವಿಷಯ'ವಾಗಿ ಮಾರ್ಪಟ್ಟು ಮನೆಯೊಡೆಯನಿಲ್ಲದ ಮನೆಯಂತೆ ತನ್ನತನದರಿವಿಲ್ಲದ ಸ್ಥಿತಿಯನ್ನು ಈ ವಚನ ಚಿತ್ರಿಸುತ್ತದೆ.

ಸ್ವತಂತ್ರಧೀರರಾದ ಕೂಡಲಸಂಗಮನ ಶರಣರ 'ಮನೆ ನೋಡಾ ಬಡವರು; ಮನ ನೋಡಾ ಘನ', ಇವರ ಸಂಗ, ಸೋಂಕು ಸುಖದಾಯಕ. 'ಪಸಾರಕನುವಿಲ್ಲ' ದಿದ್ದರೂ 'ಬಂದ ತತ್ಕಾಲಕ್ಕುಂಟು', ಆತ್ಮೀಯತೆಗೂ ಆದರಾತಿಥ್ಯಕ್ಕೂ ಆ ಮನೆಯಲ್ಲಿ ಗೃಹಿಣಿ ಇಂಬಿದೆ. ಅಲ್ಲಿ ವಾಸಿಸುವ ಭಕ್ತ ಶರಣರ ಬರವನ್ನು ಕಾತರದಿಂದ ಕಾಯುತ್ತಿದ್ದಾನೆ. ಗೃಹಿಣಿ ಸಾಯಂಕಾಲ ಮನೆಯವರ ಬರವನ್ನು ಕಾಯುವ ಈ ಪ್ರತಿಮೆಯಲ್ಲಿ ಜೀವಭಾವ, ಶರಣಭಾವಕ್ಕಾಗಿ ಕಾತರಿಸುವ ಸ್ಥಿತಿಯನ್ನು ಎರಕಹೊಯ್ದು ನಿಲ್ಲಿಸಿದೆ.

**ಗಿಳಿಯ ಪಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ**
**ಬರವ ಹಾರುತ್ತಿದ್ದೆನೆಲಗವ್ವಾ.**
**ತರಗೆಲೆ ಗಿರಕೆಂದೊಡೆ ಹೊರಗಣಾಲಿಸುವೆ:**
**ಅಗಲಿದೆನೆಂದೆನ್ನ ಮನ ದಿಗಿಲೆಂದೆತ್ತೆಲಗವ್ವಾ!**
**ಕೂಡಲಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು**
**'ಶಿವಾ' ಎಂದರೆ, ಸಂತೋಷಬಟ್ಟೆನೆಲಗವ್ವಾ!.**

ಸಾಯಂಕಾಲದ ಮನೆಗೆಲಸಗಳನ್ನೆಲ್ಲಾ ಮಾಡಿ ದೀಪ ಹಚ್ಚಿ ದಾರಿಕಾಯುವ ಈಕೆಗೆ ತರಗೆಲೆ ಗಿರುಕೆಂದರೂ ಸಾಕು ಹೊರಗೆ ಹಣಿಕಿ ಕಿವಿಗೊಡುತ್ತಾಳೆ. 'ಅಗಲಿದೆನು' ಎಂಬ ನೆನಪಿನಿಂದಲೇ ಮನಸ್ಸು ಒಳಗೊಳಗೇ ದಿಗಿಲುಗೊಳ್ಳುತ್ತದೆ. ಶರಣರು ಬಾಗಿಲಮುಂದೆ ಬಂದು 'ಶಿವಾ' ಎಂಬ ಅವರ ನುಡಿ ಕಿವಿಗೆ ಬೀಳುವದೊಂದೇ ತಡ, ಸಂತೋಷ ಮೇರೆವರಿಯುತ್ತದೆ. 'ಶರಣರ ಬರವೆನಗೆ ಪ್ರಾಣಜೀವಾಳವಯ್ಯಾ' ಎಂದು ನುಡಿದ ಬಸವಣ್ಣನವರ ಭಾವತೀವ್ರತೆಯನ್ನು ಮೇಲಿನ ವಚನದ ನುಡಿಚಿತ್ರ ಸಜೀವವಾಗಿ ನಿಲ್ಲಿಸಿದೆ.

ಮರ್ತ್ಯಲೋಕವನ್ನು ಕರ್ತಾರನ ಕಮ್ಮಟವಾಗಿ ಬಣ್ಣಿಸಿದ ಬಸವಣ್ಣನವರು ಅದನ್ನು 'ಹಿರಿದಪ್ಪ ಅಂಗಡಿ'ಯ ಪ್ರತಿಮೆಯಲ್ಲಿ ಕಡೆದು ನಿಲ್ಲಿಸಿರುವುದು ಸತ್ವಪೂರ್ಣವಾಗಿದೆ.

**ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ**
**ಹರದ ಕುಳ್ಳಿರ್ದ ನಮ್ಮ ಮಹದೇವ ಸೆಟ್ಟಿ,**
**ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು**
**ಕಾಣಿಯ ಸೋಲ: ಅರ್ಧಗಾಣಿಯ ಗೆಲ್ಲ!**
**ಜಾಣ ನೋಡವ್ವಾ, ನಮ್ಮ ಕೂಡಲಸಂಗಮದೇವಾ!**

ಈ ಪ್ರಪಂಚವೇ ಒಂದು ದೊಡ್ಡ ಅಂಗಡಿ. ಅದರ ಮಾಲೀಕ ಮಹದೇವಸೆಟ್ಟಿ ಅಲ್ಲಿ ಕುಳಿತಿದ್ದಾನೆ. ಆತನದು ಅತ್ಯಂತ ಪ್ರಾಮಾಣಿಕವಾದ ವ್ಯಾಪಾರ. ಅಲ್ಲಿ ಒಂದೇ ಮನ, ಒಂದೇ ಮಾತು. ಧಾರಣೆಯಲ್ಲಿಯೂ ಹೆಚ್ಚು ಕಡಿಮೆಯಿಲ್ಲ. ಒಂದು ದುಡ್ಡಿನ ಲಾಭವೂ ಅವನಿಗೆ ಬೇಕಿಲ್ಲ. ಹಾಗೆಯೇ ಒಂದು ದುಡ್ಡೂ ಹಾನಿ ಮಾಡಿಕೊಳ್ಳುವುದಿಲ್ಲ. ಅವನ ಜಾಣತನವನ್ನೂ, ಲೆಕ್ಕಾಚಾರವನ್ನೂ ಕಂಡು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುತ್ತೇವೆ.

ಅಂಗಡಿಯ ವ್ಯವಹಾರದಲ್ಲಿ ಜೀವನ ವ್ಯಾಪಾರವನ್ನೇ ಇಡಿಯಾಗಿ ತಾದಾತ್ಮ್ಯಗೊಳಿಸಿ ಇಲ್ಲಿ ಚಿತ್ರಿಸಲಾಗಿದೆ. 'ಮಹದೇವಸೆಟ್ಟಿ' ನಮ್ಮ ಒಮ್ಮನದ ಕಾರ್ಯದ ಫಲವನ್ನು ತೂಗಿ ಕೊಡುತ್ತಿರುವ ಜೀವಂತ ಮೂರ್ತಿಯಾಗಿದ್ದಾನೆ. ಒಮ್ಮನ-ಇಮ್ಮನಗಳ ಗೆಲುವು- ಸೋಲುಗಳನ್ನು ತಕ್ಕಡಿ ಹಿಡಿದು ತೂಗಿದಂತಿದೆ ಇಲ್ಲಿಯ ವಾಕ್ಯರಚನೆ. 'ಜಾಣ ನೋಡವ್ವಾ' ಎಂಬ ಮೆಚ್ಚಿಕೆಯ ಭಾಷೆ ಅಂಗಡಿಕಾರನ ಬಗೆಗಿರುವ ಆತ್ಮೀಯತೆಯನ್ನು ದೇವನ ಬಗೆಗೆ ಭಕ್ತನು ಪಡುವ ಅಚ್ಚರಿ ಆನಂದಗಳನ್ನು ಏಕಕಾಲಕ್ಕೆ ಸ್ಫುರಿಸುತ್ತಾ ಈ ವಚನದ ಭಾವವನ್ನು ಶ್ರೀಮಂತಗೊಳಿಸಿದೆ.

ನಾಲ್ಕು ಗೆರೆಯೆಳೆದು ಚಿತ್ರದ ಭಾವವನ್ನು ಸ್ಫುಟಗೊಳಿಸುವ ಉತ್ತಮ ಕಲಾವಿದನಂತೆ ನಾಲ್ಕು ಶಬ್ದಗಳಲ್ಲಿ ಬಸವಣ್ಣನವರು ಪರಿಣಾಮಕಾರಿಯಾದ ಜೀವಂತ ಚಿತ್ರವನ್ನು ಕೊಡಬಲ್ಲರು;

**ನೆರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,**
**ಹಲ್ಲು ಹೋಗಿ ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,**
**ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ,**
**ಪೂಜಿಸು ನಮ್ಮ ಕೂಡಲಸಂಗಮದೇವನ.**

ಸಾಲುಸಾಲಿಗೂ ಮುಪ್ಪಾವಸ್ಥೆಯ ಕರುಣಾಜನಕ ಸ್ಥಿತಿ ನಮ್ಮ ಕಣ್ಣಮುಂದೆ ನಿಲ್ಲುತ್ತದೆ. ಪ್ರತಿಯೊಂದು ವಿವರವನ್ನು ಸಜೀವಗೊಳಿಸುವ ಶಕ್ತಿ ಇಲ್ಲಿಯ ಭಾಷೆಗಿದೆ.

'ಕಾಲಮೇಲೆ ಕೈಯನೂರಿ ಕೋಲ ಹಿಡಿ'ಯುವ ಸೂಕ್ಷ್ಮಗ್ರಾಹಿಯಾದ ಸ್ವಭಾವೋಕ್ತಿ ಅನ್ಯಾದೃಶವಾಗಿ ಮೂಡಿದೆ. 'ಮೃತ್ಯು ಮುಟ್ಟದ ಮುನ್ನ' ಎಂಬಲ್ಲಿಯ ಭಾವಸೂಕ್ಷ್ಮತೆ ಗಮನಾರ್ಹವಾದುದು. ಮೃತ್ಯು ಬಂದು ಎಳೆದೊಯ್ಯಬೇಕಿಲ್ಲ; ಮುಟ್ಟಿದರೆ ಸಾಕು ಈ ದೇಹ ಕಡಿದುಕೊಂಡು ಬೀಳುತ್ತದೆ. ಇಂತ ವಿಪನ್ನಾವಸ್ಥೆಯನ್ನು ಚಿತ್ರಿಸಿ ಈ ಅವಸ್ಥೆಯನ್ನು ಮುಟ್ಟುವ ಮೊದಲೇ ಬೀಳುತ್ತದೆ. ಇಂಥ ವಿಪನ್ನಾವಸ್ಥೆಯನ್ನು ಚಿತ್ರಿಸಿ ಈ ಅವಸ್ಥೆಯನ್ನು ಮುಟ್ಟುವ ಮೊದಲೇ ದೇವನನ್ನು ಪೂಜಿಸು ಎಂಬ ನುಡಿ ಮೊದಲಿನಿಂದಲೇ ಅಂಥ ದೈವಿಕ ಶ್ರದ್ಧೆಯನ್ನಿಟ್ಟುಕೊಳ್ಳದ್ದರಿಂದ ಈ ಅವಸ್ಥೆಯೊದಗಿದೆ ಎಂಬ ಭಾವವನ್ನು ಧ್ವನಿಸುವುದಲ್ಲದೆ ಸಂಕಟ ಬಂದಾಗ ದೇವರನ್ನು ನೆನೆಯುವುದು ನಿಜವಾದ ಭಕ್ತಿಯಲ್ಲ, ಅದು ನಿರಂತರವಾಗಿ ಬದುಕಿನ ಮಾರ್ಗವಾಗಿರಬೇಕೆಂಬುದನ್ನೂ ಸೂಚಿಸುತ್ತದೆ. 'ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ. ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?' ಎಂದು ನುಡಿದ ಬೇರೊಂದು ವಚನದಲ್ಲಿಯೂ ಇದೇ ಭಾವ ಸ್ಥಾಯಿಯಾಗಿದೆ.

ಬೀಗಿ ಬೆಳೆದು ಬಾಗಿರುವ ಗೊನೆವಾಳೆಯ ಚಿತ್ರವನ್ನು ಕಂಡರಿಸಿದ ಬಸವಣ್ಣನವರು ಬಾಳೆಯ ಕಂಬದ ಪ್ರತಿಮೆಯನ್ನು ಮತ್ತೊಮ್ಮೆ ಅರ್ಥಪೂರ್ಣವಾಗಿ ಬಳಸಿದ್ದಾರೆ.

**ಮಾಡುವ ಭಕ್ತನ ಕಾಯ ಬಾಳೆಯ ಕಂಭದಂತಿರಬೇಕು.**
**ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ**
**ಒಳಗೆ ಕೆಚ್ಚಿಲ್ಲದಿರಬೇಕು.**
**ಮೇಲಾದ ಫಲವ ನಮ್ಮವರು ಬೀಜಸಹಿತ ನುಂಗಿದರು:**
**ಎನಗಿನ್ನಾವ ಭವವಿಲ್ಲ ಕಾಣಾ,**
**ಕೂಡಲಸಂಗಮದೇವಾ.**

ಕೆಚ್ಚಿಲ್ಲದೆ ಪೊರೆಪೊರೆಯಾಗಿ ಸುತ್ತಿಕೊಂಡಿರುವ ಶುಭ್ರವಾಗಿರುವ ಬಾಳೆಯ ಕಂಬ ಅಹಂಕಾರ ಮಮಕಾರಗಳಿಂದ ಕೂಡಿದ ಭಕ್ತನ ಕಾಯವನ್ನು ಚೆನ್ನಾಗಿ ಪ್ರತಿಮಿಸುತ್ತದೆ. ಒಂದೊಂದಾಗಿ ಈ ಪೊರೆಯುನ್ನು ಬಿಚ್ಚುತ್ತಾ ಹೋಗಬೇಕಾಗುವುದಲ್ಲದೆ ಒಮ್ಮೆಲೆ ಅದನ್ನು ತೆಗೆಯುವುದಕ್ಕಾಗುವುದಿಲ್ಲ. ಅದಕ್ಕಾಗಿಯೇ 'ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ' ಎಂಬ ಮತು ಔಚಿತ್ಯಪೂರ್ಣವಾಗಿದೆ. ಭಕ್ತನ ನಿರಪೇಕ್ಷ ಭಾವನೆಯನ್ನು ಪರೀಕ್ಷಿಸಲು ಭಗವಂತ ಹೀಗೆ ಸಿಪ್ಪ ಸುಲಿದು ನೋಡುತ್ತಾನೆಂಬ ಭಾವವನ್ನು ಇದು ಸೂಚಿಸುತ್ತದೆ. ಇವನಿಗೆ ಫಲಾಪೇಕ್ಷೆಯೇ ಇಲ್ಲ. ಬಂದ ಫಲವನ್ನು ತಮ್ಮವರಿಗೆ (ಶರಣರಿಗೆ)

ಅರ್ಪಿಸಿಬಿಟ್ಟಿದ್ದಾನೆ. 'ಮೇಲಾದ ಫಲವ' ಎನ್ನುವಲ್ಲಿ 'ತುದಿಯಲ್ಲಿ ಬಿಟ್ಟ' ಹಾಗೂ 'ಶ್ರೇಷ್ಠವಾದ' ಎಂಬ ದ್ವಂದ್ವಾರ್ಥ ಇಲ್ಲಿಯ ಭಾವವನ್ನು ಶ್ರೀಮಂತಗೊಳಿಸಿದೆ. 'ಬೀಜ ಸಹಿತ ನುಂಗಿದ'ರು ಎಂಬ ಮಾತು ಮತ್ತೆ ಭವದಲ್ಲಿ ಬಾರದಂತೆ ಅದರಿಂದ ಮುಕ್ತನನ್ನಾಗಿ ಮಾಡಿದರು ಎಂಬುದನ್ನು ಸುಂದರವಾಗಿ ಧ್ವನಿಸುತ್ತದೆ. ಹೀಗೆ ಕಿರಿದರಲ್ಲಿ ಹಿರಿದರ್ಥವನ್ನು ಸೂಸುವ ಪ್ರತಿಮಾ ವಿಧಾನದಿಂದ ಕಾವ್ಯಾರ್ಥವನ್ನು ಪುಷ್ಟಿಗೊಳಿಸುವ ರೀತಿ ಶ್ರೇಷ್ಠ ಕಾವ್ಯದ ಲಕ್ಷಣವಾಗಿದೆ.

ಬಸವಣ್ಣನವರ ಸೂಕ್ಷ್ಮ ನಿರೀಕ್ಷಣೆಯಿಂದ ಅವರ ಭಾವಾಭಿವ್ಯಕ್ತಿ ಸಂಪದ್ಭರಿತ ವಾಗಿರುವುದಕ್ಕೆ ಇನ್ನೊಂದು ಉದಾಹರಣೆ:

**ಜ್ಞಾನಾಮೃತವೆಂಬ ಜಲಧಿಯ ಮೇಲೆ**
**ಸಂಸಾರವೆಂಬ ಹಾವಸೆ ಬಂದು ಮುಸುಕಿಹುದು;**
**ನೀರ ಮೊಗೆದರೆ ಬಂದು ನೂಕುವುದಲ್ಲದೆ ತೆರಳದು.**
**ಮರಳಿ ಮರಳಿ ಮುಸುಕುವುದ ಮಾಣದಯ್ಯಾ!**

ನೀರನ್ನು ಬಳಸದೆ ಬಿಟ್ಟ ಬಾವಿಯಲ್ಲಿ ಹಾವಸೆ ಬೆಳೆದು ನೀರಮೇಲೆಲ್ಲಾ ಪಸರಿಸಿರುತ್ತದಷ್ಟೆ. ಆ ಹಾವಸೆಯನು ಬದಿಗೆ ಸರಿಸಿ ಕುಡಿಯಲು ಬೊಗಸೆಯಿಂದ ನೀರು ತೆಗೆದುಕೊಳ್ಳುವಷ್ಟರಲ್ಲಿ ಸುತ್ತಮುತ್ತಲಿನಿಂದ ಅದು ಮತ್ತೆ ಬಂದು ಆವರಿಸಿಬಿಡುತ್ತದೆ. ಎಷ್ಟು ಸಲ ನಾವು ಕುಡಿಯಲು ಹೀಗೆ ಪ್ರಯತ್ನಿಸುತ್ತೇವೆಯೋ ಅಷ್ಟು ಸಲ ಅದು ಮರಳಿ ಮರಳಿ ಮುಸುಕುತ್ತದೆ. ಜ್ಞಾನಾಮೃತವನ್ನು ಸವಿಯಬೇಕೆಂದು ಮನಸ್ಸನ್ನು ಆ ಕಡೆಗೆ ಸ್ಥಿರಗೊಳಿಸುವಷ್ಟರಲ್ಲಿ ಸಂಸಾರದ ಜಂಜಡ ಬಂದು ಮುಸುಕಿ ಅದಕ್ಕೆ ಆಸ್ಪದವೀಯದಂತೆ ಮಾಡುತ್ತದೆಂಬುದನ್ನು ಹಾವಸೆಗಟ್ಟಿದ ನೀರಿನ ಪ್ರತಿಮೆಯಿಂದ ಚಿತ್ರವತ್ತಾಗಿ ಮೂಡಿಸಲಾಗಿದೆ. ಬಸವಣ್ಣನವರ ಬಾಳಿನ ಸೂಕ್ಷ್ಮ ನಿರೀಕ್ಷಣೆ ಹಾಗೂ ತಕ್ಕ ಭಾಷೆಯಲ್ಲಿ ಅದು ಅಭಿವ್ಯಕ್ತಿಗೊಳ್ಳುವ ರೀತಿ ಇಂಥ ಸಂದರ್ಭಗಳಲ್ಲಿ ಅತ್ಯಂತ ಮೇಲ್ಮಟ್ಟದ್ದಾಗಿ ಅದು ಅಭಿವ್ಯಕ್ತಿಗೊಳ್ಳುವ ರೀತಿ ಇಂಥ ಸಂದರ್ಭಗಳಲ್ಲಿ ಅತ್ಯಂತ ಮೇಲ್ಮಟ್ಟದ್ದಾಗಿ ಕಂಗೊಳಿಸುತ್ತದೆ.

ಇದುವರೆಗೆ ವಿವರಿಸಿದ ವಚನಗಳಲ್ಲಿ ಅಲ್ಲಲ್ಲಿ ಶ್ಲೇಷೆಯೂ ಅರ್ಥವಿಸ್ತಾರಕ್ಕೆ ನೆರವಾಗಿರುವುದನ್ನು ಕಂಡಿದ್ದೇವೆ. ಬಸವಣ್ಣನವರ ವಚನಗಳಲ್ಲಿ ಕಂಡುಬರುವ ಶ್ಲೇಷೆ ಸಹಜವೂ ಅರ್ಥಪುಷ್ಟಿಯನ್ನೊದಗಿಸುವಂಥದೂ ಆಗಿದೆ:

**ಬಂಡಿತುಂಬ ಪತ್ರೆಯ ತಂದು ಕಂಡಕಂಡಲ್ಲಿ ಮಜ್ಜನಕ್ಕೆರೆವಿರಿ.**
**ತಾಪತ್ರಯವ ಕಳೆದು ಪೂಜಿಸಿ; ತಾಪತ್ರಯವ ಲಿಂಗನೊಲ್ಲ.**
**ಕೂಡಲಸಂಗಮದೇವ ಬರಿಯುದಕದಲ್ಲಿ ನೆನೆವನೆ ?**

ಡಾಂಭಿಕತನದ ಪೂಜೆ ಮಾಡುವವರಿಗೆ ಇದೊಂದು ಹಿತೋಕ್ತಿ. ಮೊದಲ ಸಾಲು ಅಂಥ ಡಂಭಾಚಾರವನ್ನು 'ಬಂಡಿತುಂಬ', 'ಕಂಡಕಂಡಲ್ಲಿ' ಎಂಬ ಪದಗಳಿಂದ ಚಿತ್ರಿಸುತ್ತದೆ. ಪತ್ರೆಗೆ ಮೂರು ದಳ, ಮಾನವನ ಮನಸ್ಸಿನಲ್ಲಿಯೂ ಮೂರು ತಾಪಗಳಿವೆ. (ಆದಿಭೌತಿಕ, ಆಧ್ಯಾತ್ಮಿಕ, ಆಧಿದೈವಿಕ), ಅವುಗಳನ್ನು ಕಳೆದು ನಿರ್ಮಲ ಮನಸ್ಸಿನಿಂದ ಪತ್ರೆಯನ್ನೇರಿಸಿ ಪೂಜಿಸಿದರೆ ದೇವರು ಮೆಚ್ಚುತ್ತಾನೆ. 'ಪತ್ರೆ' ಹಾಗೂ 'ತಾಪತ್ರಯ' ಈ ಪದಗಳ ಸಾಹಚರ್ಯ ಈ ಮಾತಿನ ಅರ್ಥವಂತಿಕೆಯನ್ನು ಹೆಚ್ಚಿಸಿದೆ. ಮಜ್ಜನಕ್ಕೆರೆಯುವುದೇ ಮೊದಲಾದ ಬಹಿರಂಗ ಕ್ರಿಯೆಯಿಂದ ಲಿಂಗ ನೆನೆಯುವುದಿಲ್ಲ; ಮನಸ್ಸಿನಲ್ಲಿ ನೆನೆದರೆ ಮಾತ್ರ ದೇವರ ಹೃದಯವೂ ಭಕ್ತನ ಬಗೆಗೆ ಮೃದುವಾಗುತ್ತದೆ. 'ಬರಿಯುದಕದಲ್ಲಿ ನೆನೆವನೆ?' ಎಂಬ ನುಡಿ ಹೀಗೆ ದ್ವಂದ್ವಾರ್ಥವನ್ನು ಸಾರ್ಥಕಗೊಳಿಸಿದೆ.

ಪರನಾರಿಯ ಸಂಗ, ಪರಧನಾಮಿಷವನ್ನು ತೊರೆಯದೆ ತೊರೆ (ನದಿ)ಯಲ್ಲಿ ಸ್ನಾನ ಮಾಡಿ ಪವಿತ್ರರಾದೆವೆಂದು ಭಾವಿಸುವವರನ್ನು ಚುಚ್ಚಿ ನುಡಿಯುವಲ್ಲಿ 'ತೊರೆ' (೧. ನದಿ, ೨. ಬಿಡು) ಪದವನ್ನು ನಾಮ ಹಾಗೂ ಕ್ರಿಯಾರೂಪದಲ್ಲಿ ಬಳಸಿ ತ್ಯಾಗಧೋರಣೆಯನ್ನು ಮುಂದಿನ ವಚನದಲ್ಲಿ ಸ್ಫುಟಗೊಳಿಸಲಾಗಿದೆ:

**ತೊರೆಯ ಮೀವಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ;**
**ತೊರೆಯಿಂಭೋ, ತೊರೆಯಿಂಭೋ,**
**ಪರನಾರಿಯ ಸಂಗವ ತೊರೆಯಿಂಭೋ!**
**ಪರಧನಾಮಿಷವ ತೊರೆಯಿಂಭೋ!**
**ಇವ ತೊರೆಯದೆ ಹೋಗಿ ತೊರೆಯ ಮಿಂದರೆ**
**ಬರುದೊರೆ ಹೋಹುದು ಕೂಡಲಸಂಗಮದೇವಾ.**

ದುರ್ಗುಣಗಳನ್ನು ತೊರೆಯದೆ ತೊರೆಯಲ್ಲಿ ಮಿಂದರೆ ಆ ತೊರೆಯೇ ಬತ್ತಿ ಹೋಗುತ್ತದಂತೆ. 'ಅಣ್ಣಗಳಿರಾ', 'ಸ್ವಾಮಿಗಳಿರಾ', 'ತೊರೆಯಿಂಭೋ' ಎಂಬ ಸಂಬೋಧನೆಯ ರೀತಿ ಇಡಿಯ ವಚನವನ್ನೇ ವ್ಯಂಗ್ಯದ ಧಾಟಿಯಲ್ಲಿ ನಡೆಸಿಕೊಂಡು ಹೋಗಿ ಕೊನೆಯ ಎರಡು ಸಾಲುಗಳಲ್ಲಿ ತೀಕ್ಷ್ಣವಾಗಿ ತಕ್ಕ ಪರಿಣಾಮವನ್ನು ಬೀರುತ್ತದೆ.

ಹೊಸದಾಗಿ ಗಂಡನ ಮನೆಗೆ ಬಂದ ಮದುವಣಗಿತ್ತಿಗೆ ಬೋಧಿಸುವಂತೆ ಬಸವಣ್ಣನವರು ತಮ್ಮ ಆತ್ಮಕ್ಕೆ ಹೇಳಿಕೊಂಡ ಈ ವಚನದ ಸೊಗಸನ್ನು ನೋಡಿ:

**ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡ, ಮದವಳಿಗೆ;**
**ಇದು ನಮ್ಮ ಬಾಳುವೆ, ಮದವಳಿಗೆ**
**ಇದು ನಮ್ಮ ವಿಸ್ತಾರ ಮದವಳಿಗೆ!**
**ಮದವಳಿದು ನಿಜವುಳಿದ ಬಳಿಕ ಅದು ಸತ್ಯ ಕಾಣಾ,**
**ಕೂಡಲಸಂಗಮದೇವಾ.**

'ಐದು ಮಾನ' (೧. ಒಂದು ಅಳತೆ, ೨. ಪಂಚೇಂದ್ರಿಯಗಳು), 'ಒಂದು ಮಾನ' (೧. ಅಳತೆ, ೨. ಏಕಾಗ್ರಚಿತ್ತ), 'ಮದವಳಿಗೆ' (೧). ಮದುವಣಗಿತ್ತಿ, ೨. ಅಹಂಕಾರವಳಿಯಲಿ) ಈ ಪದಗಳ ದ್ವಂದ್ವಾರ್ಥದ ಹಿತವಾದ ಬಳಕೆ ಈ ವಚನದ ಅರ್ಥಸ್ವಾರಸ್ಯವನ್ನು ಇಮ್ಮಡಿಸಿದೆ. ಐದು ಮಾನ ಒಂದು ಮಾನ ಕಾಳನ್ನು ಕೇರಿ, ಕುಟ್ಟಿ ಮಾಡಿ ಹದಗೊಳಿಸುವಂತೆ, ಹರಿದಾಡುವ ಪಂಚೇಂದ್ರಿಯಗಳನ್ನು ಶಿಕ್ಷಿಸಿ, ಏಕಾಗ್ರಚಿತ್ತಕ್ಕೆ ಅಣಿಗೊಳಿಸಬೇಕು. ಅಹಂಕಾರ ನಿರ್ಮೂಲನವೇ ನಮ್ಮ ನಿಜವಾದ ಬಾಳುವೆಯ ಹಿರಿಮೆ. ಹೀಗೆ ಮದವಳಿದು ನಿಜವುಳಿದದ್ದೇ ಸತ್ಯ. ಕುಟ್ಟಿ ತಳಿಸಿದಾಗ ಕಾಳು ಸಿಪ್ಪೆಗಳೆದು ಬರಿಯ ತಿರುಳಾಗಿ ನಿಲ್ಲುವಂತೆ ಈ ಜೀವನ ಮದವಳಿದಾಗ 'ನಿಜ'ದ ಅರಿವು ಮೂಡುತ್ತದೆ. 'ಮದವಳಿಗೆ' ಪದದ ಪುನರುಕ್ತಿ ಆತ್ಮೀಯತೆಯನ್ನು ಹೆಚ್ಚಿಸುವುದರ ಜೊತೆಗೆ 'ಅಹಂಕರವಳಿಯಲಿ' ಎಂಬ ಭಾವವನ್ನು ಮನಸ್ಸಿನಲ್ಲಿ ಅಚ್ಚೊತ್ತುತ್ತದೆ.

ಸಲ್ಲದ ಆಚಾರ-ವಿಚಾರಗಳನ್ನು ರೀತಿ-ನೀತಿಗಳನ್ನು ಖಂಡಿಸುವಾಗ ಬಸವಣ್ಣನವರ ಮಾತು ಇನ್ನಷ್ಟು ಹರಿತಗೊಳ್ಳುತ್ತದೆ; ಭಾಷೆಯಲ್ಲಿ ಸೂಕ್ಷ್ಮವಾದ ವ್ಯಂಗ್ಯ ವಿಡಂಬನೆ ಮೈದಾಳುತ್ತವೆ:

**"ಏನಿ ಬಂದಿರಿ ಹದುವಳವಿದ್ದಿರೆ?" ಎಂದರೆ**
**ನಿಮ್ಮ ಮೈಸಿರಿ ಹಾರಿ ಹೋಹುದೆ?**
**"ಕುಳ್ಳಿರೆಂ"ದರೆ ನೆಲ ಕುಳಿ ಹೋಹುದೆ?**
**ಒಡನೆ ನುಡಿದರೆ ಶಿರ-ಹೊಟ್ಟೆಯೊಡೆಯುವುದೆ?**
**ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ**
**ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವನು?**

ಸಾಮಾಜಿಕ ನೀತಿ ನಡವಳಿಕೆಯನ್ನು ಮಾರ್ಮಿಕವಾಗಿ ಬಿಂಬಿಸುವಲ್ಲಿ ಈ ವಚನದ ತುಂಬ ಆಡುಮಾತು ಹಾಸುಹೊಕ್ಕಾಗಿ ಅದರ ಶಕ್ತಿಯನ್ನು, ಓರೆಧ್ವನಿಯನ್ನು ಸೂರೆಗೊಳ್ಳಲಾಗಿದೆ.

**ಒಂದಕ್ಕೊಂಬತ್ತು ನುಡಿದು, ಕಣ್ಣ ಕೆಂಚನೆ ಮಾಡಿ, ಗಂಡುಗೆದರಿ,**
**ಮುಡುಹಿಕ್ಕಿ ಕೆಲೆವವರ ಕಂಡಡಂಜುವೆ, ಓಸರಿಸುವೆ**

ಎನ್ನುತ್ತಾರೆ. ಬಸವಣ್ಣನವರು ಜನದ ಸ್ವಭಾವವನ್ನು ಬಹು ಸೂಕ್ಷ್ಮವಾಗಿ ಕಂಡುಕೊಂಡಿದ್ದಾರೆ:

**ಎಲ್ಲರೂ ವೀರರು, ಎಲ್ಲರೂ ಧೀರರು;**
**ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು;**
**ಕಾಳಗದ ಮುಖದಲ್ಲಿ ಕಾಣಬಾರದು,**
**ಓಡುವ ಮುಖದಲ್ಲಿ ಕಾಣಬಹುದು!**

ವಾಸ್ತವ ಪರಿಜ್ಞಾನದಿಂದ ಎಂಥ ವ್ಯಂಗ್ಯ ತುಂಬಿದೆ ಈ ನುಡಿಯಲ್ಲಿ.

ಒಬ್ಬನೇ ದೇವರೆಂದು ನಂಬದೆ ಹಲವಾರು ಕಿರುಕುಳ ದೈವಗಳನ್ನು ಪೂಜಿಸಿ ಮೊರೆಯಿಡುವ ಅಜ್ಞತೆಯನ್ನು ಕಂಡು ಅವರ ಮಾತಿಗೆ ಕಾವೇರಿದರೂ ಕನಿಕರವೂ ಅದರಲ್ಲಿ ಬೆರೆತುಕೊಳ್ಳುತ್ತದೆ.

**ನೀರ ಕಂಡಲ್ಲಿ ಮುಳುಗುವರಯ್ಯಾ**
**ಮರನ ಕಂಡಲ್ಲಿ ಸುತ್ತುವರಯ್ಯಾ:**
**ಬತ್ತುವ ಜಲವ, ಒಣಗುವ ಮರನ**
**ಮೆಚ್ಚಿದವರು ನಿಮ್ಮನೆತ್ತ ಬಲ್ಲರು**
**ಕೂಡಲಸಂಗಮದೇವಾ?**

ಅಚ್ಚುಕಟ್ಟಾದ ಭಾವನಿರೂಪಣೆ, ವಿಚಾರದ ಹೊಳಪು ಮುಕ್ತಕದಂತೆ ಕಂಗೊಳಿಸುತ್ತದೆ ಇಂಥ ವಚನಗಳಲ್ಲಿ.

ಜನರ ಮೂಢನಂಬಿಕೆಗಳೇ ಆಹಾರವಾಗಿರುವ ಹಲವಾರು ಕಿರುಕುಳ ದೈವಗಳಿವೆ. ಅಂಥ 'ನೂರು ಮಡಿಕೆಗೆ ನಮ್ಮ ಕೂಡಲಸಂಗಮದೇವಾ ಶರಣೆಂಬುದೊಂದು ದಡಿ ಸಾಲದೆ', ಎಂದು ಕೇಳುತ್ತಾರೆ ಬಸವಣ್ಣನವರು. ಪೊಳ್ಳಾದ ಇಂಥ ನೂರು ಮಡಿಕೆಗಳನ್ನು ಏಕದೇವತೋಪಾಸನೆಯೆಂಬ ಬಡಿಗೆ ಪುಡಿ ಪುಡಿ ಮಾಡಬಲ್ಲುದು. ಬಸವಣ್ಣನವರ ಭಾವದ ತೀವ್ರತೆ, ವಿಚಾರದ ತೀಕ್ಷ್ಣತೆ ಇಂಥ ಸಂದರ್ಭಗಳಲ್ಲಿ ವಿಡಂಬನೆಯ ಮಸೆದಲಗನ್ನು ಹಿಡಿಯುತ್ತದೆ:

**ಅರಗು ತಿಂದು ಕರಗುವ ದೈವ,**
**ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ?**

ಅವಸರ ಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ ?
ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ ?
ಸಹಜಭಾವನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ.

ಇಲ್ಲಿಯ ಮಾತಿನ ಪೆಟ್ಟು ಮುಟ್ಟಿ ಮುಟ್ಟಿ ನೋಡಿಕೊಳ್ಳುವಂತೆ ಮಾಡುತ್ತದೆ.

ಲೋಗರನ್ನು ಬೇಡಿಕೊಂಡುಂಬ ಕೆಲವು ದೈವಗಳ ಸ್ಥಿತಿ ಇನ್ನೂ ಶೋಚನೀಯ. ಅದನ್ನು ಬಸವಣ್ಣನವರ ಬಾಯಿಂದಲೇ ಕೇಳಬೇಕು:

ಆಗಳೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪುವು,
ಕೆಲವು ದೈವಂಗಳು;
ಹೋಗೆಂದರೆ ಹೋಗವು ಕೆಲವು ದೈವಂಗಳು,
ನಾಯಿಂದಲೂ ಕರಕಷ್ಟ ಕೆಲವು ದೈವಂಗಳು,
ಲೋಗರ ಬೇಡಿಕೊಂಡುಂಬ ದೈವಂಗಳು
ತಾವೇನ ಕೊಡುವವು ಕೂಡಲಸಂಗಮದೇವಾ?

ನಾಯಿಯಂತೆ ಬಾಗಿಲ ಕಾಯ್ದುಕೊಂಡು ಹೊಡೆದರೂ ಹೋಗದೆ ಹಾಕಿದ್ದನ್ನು ತಿಂದು ಬದುಕುವ ದೈವಗಳ ಎಂಥ ಕಟು ವಿಡಂಬನೆ! 'ದೈವವೆಂದು ಕಾಲಿಡಲಿಂಬಿಲ್ಲಾ' ಎಂದು ಒಂದೇ ವಾಕ್ಯದಲ್ಲಿ ಆ ಕಾಲದ ಜನಸಾಮಾನ್ಯರ ಧಾರ್ಮಿಕ ಸ್ಥಿತಿಯನ್ನು ಮನಮುಟ್ಟುವಂತೆ ನಿರೂಪಿಸಲಾಗಿದೆ.

ಅಜ್ಞನಾದ ಸಾಮಾನ್ಯ ಜನತೆಯ ಸ್ಥಿತಿ ಇದಾದರೆ ಸುಜ್ಞರೆನಿಸಿಕೊಂಡವರ, 'ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ'ಯಾಗಿ ವರ್ತಿಸುವವರ ಢಾಂಬಿಕ ಜೀವನವನ್ನು ಕಣ್ಣ ಮುಂದೆ ಕಟ್ಟುವಂತೆ ಚಿತ್ರಿಸಿದ್ದಾರೆ ಬಸವಣ್ಣನವರು:

ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲಿದ್ದು
ಮೂಗ ಹಿಡಿದು ಧ್ಯಾನವ ಮಾಡುವರಯ್ಯಾ
ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುವ
ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯಾ
ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು
ಕೂಡಲಸಂಗನನರಿಯದೆ ಮೊರೆಯಿಡುವಂತೆ!

ಕೆರೆಯ ದಂಡೆಯಲ್ಲಿ ಕಣ್ಣು ಮುಚ್ಚಿ ಒಂಟಿಗಾಲಿನಲ್ಲಿ ನಿಂತು, ಮೀನ ಕಂಡೊಡನೆ 'ಗುಳಕ್' ಎಂದು ನುಂಗುವ ಬಕಪಕ್ಷಿಯ ಪ್ರತಿಮೆಯ ಮೂಲಕ

ವೇಷಧಾರಿಗಳ ನಡತೆಯನ್ನು ಎಷ್ಟೊಂದು ಸಮರ್ಪಕವಾಗಿ ವಿಡಂಬಿಸಿದ್ದಾರೆ ಈ ವಚನದಲ್ಲಿ! 'ಮೂಗು ಹಿಡಿದು ಧ್ಯಾನ ಮಾಡುವ', 'ಬಾಯಿ ಮಿಡುಕಿಸುವ ಕಣ್ಣ ಮುಚ್ಚಿ ಬೆರಳನೆಣಿಸುವ' ಇವರ ವಂಚಕತನವನ್ನು ಕೈಯಲ್ಲಿ ಕಟ್ಟಿದ 'ಪವಿತ್ರ' ಕೊಡಬಲ್ಲುದು. ಅದು ದೇವರಲ್ಲಿ ಅರಿಯದೆ ಮೊರೆಯಿಡುತ್ತಿದೆ ಎಂಬಲ್ಲಿ ವಿಡಂಬನೆ ತನ್ನ ಆಧಿಕ್ಯವನ್ನು ಸಾಧಿಸಿದೆ.

'ಶಾಸ್ತ್ರವೆಂಬುದು ಹೋತಿಂಗೆ ಮಾರಿ'ಯಾಗಿ 'ಹೋಮದ ನೆವದಲ್ಲಿ ಹೋತ ತಿಂಬ'ವರನು ಕುರಿತು ನೇರವಾಗಿ ನುಡಿಯದೆ ಯಜ್ಞಪಶುವನ್ನೇ ಸಂಬೋಧಿಸಿ ನುಡಿದ ವಚನ ಪರೋಕ್ಷ ಪರಿಣಾಮವನ್ನು ಉತ್ಕೃಷ್ಟವಾದ ರೀತಿಯಲ್ಲಿ ಸಾಧಿಸಿದೆ:

**ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು**
**ಎಲೆ ಹೋತೆ, ಅಳು ಕಂಡಾ !**
**ವೇದವನೋದಿದವರ ಮುಂದೆ ಅಳು ಕಂಡಾ !**
**ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ !**
**ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.**

ಈ ಮಾತಿನಲ್ಲಿ ಅಡಗಿರುವ ವ್ಯಂಗ್ಯ ಕಾರುಣ್ಯಭಾವದಲ್ಲಿ ಕರಗಿ ಕಂಬನಿ ಮಿಡಿಸುತ್ತದೆ. 'ದಯವಿಲ್ಲದ ಧರ್ಮವದೇವುದಯ್ಯಾ? ದಯವಿರಬೇಕು ಸಕಲ ಪ್ರಾಣಿಗಳಲ್ಲಿ, ದಯವೇ ಧರ್ಮದ ಮೂಲವಯ್ಯಾ!' ಎಂದು ಜೀವನದ ಪರಮ ಮೌಲ್ಯವನ್ನು ಕುರಿತು ಆಡಿದ ಅವರ ಮಾತು ಇಲ್ಲಿ ಪ್ರತಿಧ್ವನಿಗೈಯುತ್ತದೆ.

ಆಡಂಬರಪ್ರಿಯರಾಗಿ ಅಹಂಕಾರದಿಂದ ಉಬ್ಬಿ ಮೆರವಣಿಗೆ ಮಾಡಿಸಿಕೊಂಡು, ಸತ್ತದ ನಿಲವನ್ನರಿಯದೆ ಹೋಗುವವರನ್ನು ಕಂಡರೆ ಬಸವಣ್ಣನವರಿಗೆ ಕನಿಕರವೆನಿಸುತ್ತದೆ:

**ಆನೆಯನೇರಿಕೊಂಡು ಹೋದಿರೆ ನೀವು,**
**ಕುದುರೆಯನೇರಿಕೊಂಡು ಹೋದಿರೆ ನೀವು,**
**ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ, ಅಣ್ಣಾ!**
**ಸತ್ತದ ನಿಲವನರಿಯದೆ ಹೋದಿರಲ್ಲಾ;**
**ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ!**
**ಅಹಂಕಾರವೆಂಬಸದಮದಗಜವೇರಿ**
**ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!**
**ನಮ್ಮ ಕೂಡಲಸಂಗಮದೇವನನರಿಯದೆ**
**ನರಕಕ್ಕೆ ಭಾಜನವಾದಿರಲ್ಲಾ!**

ಆನೆಯನೇರಿಕೊಂಡು ಉಳಿದವರಿಗಿಂತ ಎತ್ತರವಾಗಿ ಮೆರೆಯಬಯಸುವ ಬಹಿರಾಡಂಬರದವರು 'ಸತ್ಯದ ನಿಲವು' ಅದಕ್ಕೂ ಎತ್ತರವಾಗಿರುವುದನ್ನರಿಯರು. 'ಹೋದಿರೆ' ಎಂಬ ಪದ ಮೇಲೆ ಮೇಲೆ ಬಂದು 'ವ್ಯರ್ಥ ಹಾಳಾದಿರಲ್ಲಾ' ಎಂಬ ಕನಿಕರ ಭಾವವನ್ನು ಸಾಲು ಸಾಲಿಗೆ ಉಕ್ಕಿಸುತ್ತದೆ. ಅಹಂಕಾರವೆಂಬ ಮದಗಜದ ರೂಪಕ ಈ ವಚನದ ಭಾವವನ್ನು ಸುಂದರವಾಗಿ ಭಟ್ಟಿಯಿಳಿಸಿದೆ. ಬಸವಣ್ಣನವರ ವಚನಗಳ ರಚನಾವಿಧಾನದ (Technique) ಅಪೂರ್ವತೆಯನ್ನು ಇಂಥ ವಚನಗಳಲ್ಲಿ ಕಾಣುತ್ತೇವೆ.

ಭಕ್ತಿ ಭಂಡಾರಿಯಾದ ಬಸವಣ್ಣನವರ ವಚನಗಳಲ್ಲಿ ಭಾವ-ಬುದ್ಧಿಯ ಬೆಸುಗೆಯನ್ನು ಕಂಡರೂ ಭಾವೋತ್ಕಟತೆಯ ಕೈಮೇಲಾಗಿರುವುದೂ ನಿಜ. ಅವರ ನಿರ್ಮಲ ಹೃದಯದಿಂದ ಹೊರಹೊಮ್ಮುವ ಭಾವಾವೇಶ ಅನುರೂಪವಾದ ಭಾಷೆಯಲ್ಲಿ ಸಂಭವಿಸಿ ತನ್ನ ಉತ್ಕಟತೆಯನ್ನು, ಉತ್ಕಂಠತೆಯನ್ನು ಇನ್ನಿಲ್ಲದಂತೆ ಪ್ರಕಾಶಿಸುತ್ತದೆ.

ನಾಮಾಮೃತದ ಸೊಗಸಿಗೆ ಹೃದಯ ಉಕ್ಕೇರಿದಾಗ :

**ಎದೆ ಬಿರಿವನ್ನಕ್ಕ ಮನ ದಣಿವನ್ನಕ್ಕ**
**ನಾಲಗೆ ನಲಿದಾಡುವನ್ನಕ್ಕ.**
**ನಿಮ್ಮ ನಾಮಾಮೃತವ ತಂದಿರಿಸು ಕಂಡಯ್ಯಾ,**
**ಎನಗೆನ್ನ ತಂದೇ!**
**ಬಿರಿ ಮುಗುಳಂದದಿ ಎನ್ನ ಹೃದಯ**
**ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ.**

ನಿರ್ಮಲವಾದ ಸಮರಸಭಾವ ತೀವ್ರಗೊಂಡಾಗ :

**ಕಾಮಸಂಗ ನಿಸ್ಸಂಗವಾಗಿ ಇನ್ನಾವ ಸಂಗವನರಿಯೆನಯ್ಯಾ.**
**ಮಿಗೆವೊಲಿದೆನಾಗಿ ಅಗಲಲಾರೆನು**
**ನಗೆಮೊಗದರಸ ಅವಧಾರು! ಕೂಡಲಸಂಗಮದೇವಾ,**
**ಬಗಿದು ಹೊಗುವೆ ನಾ ನಿಮ್ಮ ಮನವನು.**

ಕಿಂಕರ ಭಾವದ ಉತ್ಕಟತೆಗೆ :

**ಕಾಗೆ ವಿಷ್ಟಿಸುವ ಹೊನ್ನಕಳಸವಹುದರಿಂದ**
**ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ.**

ಸಂಸಾರದ ಜಂಜಡದಿಂದ ಮನಸ್ಸು ತಲ್ಲಣಗೊಂಡಾಗ :

**ಅಕಟಕಟಾ! ಶಿವ, ನಿನಗಿನಿತು ಕರುಣವಿಲ್ಲ.**
**ಅಕಟಕಟಾ! ಶಿವ, ನಿನಗಿನಿತು ಕೃಪೆಯಿಲ್ಲ.**
**ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕದೂರನ ?**
**ಏಕೆ ಹುಟ್ಟಿಸಿದೆ?**
**ಕೂಡಲಸಂಗಮದೇವ, ಕೇಳಯ್ಯಾ**
**ಎನಗಾಗಿ ಮತ್ತೊಂದು ತರುಮರನಿಲ್ಲವೇ?**

ಅವಗುಣಿಗಳ ಆಚಾರವನ್ನು ಅಲ್ಲಗಳೆಯುವ ಸಂದರ್ಭದಲ್ಲಿ :

**ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ !**
**ಪಾಪಿ ಹೂವನೇರಿಸಲು ಮಸೆದಡಾಯುಧದ ಗಾಯ**

ಜಾತಿಮತ್ಸರವನ್ನು ಧಿಕ್ಕರಿಸಿ ನುಡಿವಾಗ :

**ವೇದಕ್ಕೆ ಒರೆಯ ಕಟ್ಟುವೆ ಶಾಸ್ತ್ರಕ್ಕೆ ನಿಗಳವನಿಕ್ಕುವೆ:**
**ತರ್ಕದ ಬೆನ್ನಬಾರನೆತ್ತುವೆ,**
**ಆಗಮದ ಮೂಗ ಕೊಯ್ಯುವೆ ನೋಡಯ್ಯಾ**
**ಮಹಾದಾನಿ ಕೂಡಲಸಂಗಮೇವ,**
**ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ.**

ಕುಲವನರಸುವ ಪ್ರಶ್ನೆ ಬಂದಾಗ :

**ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ;**
**ಹಾಸನಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ;**
**ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?**

ಭಾವೋದ್ವೇಗ ಇಳಿದು ತಿಳಿಗೊಂಡಾಗ ಸುಖ-ಸಂಯಮದ ಅಭಿವ್ಯಕ್ತಿ ಸಾಲು ಸಾಲುಗಳಲ್ಲಿ ಆನಂದದ ಅಮೃತ ಕುಂಭವನ್ನು ಹೊತ್ತು ಬರುತ್ತದೆ:

**ನಿಮ್ಮ ನೋಟವನಂತ ಸುಖ, ಕೂಟ ಪರಮ ಸುಖ:**
**ಅವುಟುಕೋಟಿ ರೋಮಂಗಳು ಕಂಗಳಾಗಿ ನೋಡುತ್ತಿದ್ದೆನು !**
**ಕೂಡಲಸಂಗಮದೇವಯ್ಯಾ, ನಿಮ್ಮ ನೋಡಿ ನೋಡಿ**
**ಮನದಲ್ಲಿ ರತಿ ಹುಟ್ಟಿ ನಿಮಿರ್ದುವೆನ್ನ ಕಳೆಗಳು!**

ಕಾವ್ಯ ವಸ್ತುವಿನ ವ್ಯಾಪ್ತಿಯನ್ನು ವಿಸ್ತಾರಗೊಳಿಸಿ ಮಧ್ಯಬಿಂದುವಿನಲ್ಲಿ ಭಾವವನ್ನು ಕೇಂದ್ರೀಕರಿಸುವ ಸಾಮರ್ಥ್ಯ ಅವರ ಭಾಷೆಗಿದೆ:

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ;
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ!
ಅಗಮ್ಯ ಅಗೋಚರ ಅಪ್ರತಿಮಲಿಂಗವೇ ಕೂಡಲಸಂಗಮದೇವಯ್ಯಾ
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ.

ಸಕಲೇಂದ್ರಿಯಗಳು ಲಿಂಗಭಾವದಿಂದ ಸಂತೃಪ್ತಿಗೊಂಡು, ಹೃದಯತುಂಬಿ ಲಿಂಗವೇ ತಾನಾದಾಗಿನ ಐಕ್ಯಸ್ಥಿತಿಯ ಬಣ್ಣನೆಗೆ ಬೇರೆ ಬಣ್ಣವೇ ಬೇಕಿಲ್ಲ:

ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ,
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ,
ಮನ ತುಂಬಿದ ಬಳಿಕ ನೆನೆಯಲಿಲ್ಲ,
ಮಹಾಂತ ಕೂಡಲಸಂಗಮದೇವನ!

ಈ ವಚನಗಳಲ್ಲಿ ಛಂದೋಲಯ ಕೆಲಮಟ್ಟಿಗೆ ಕಂಡುಬಂದರೂ ಉಸಿರಿಗೆ ತಕ್ಕ ಹಾಗೆ ಆಡುವ ಭಾವಲಯ ನಮ್ಮ ಮನಸ್ಸನ್ನು ಸೆರೆ ಹಿಡಿಯುತ್ತದೆ. ಹಲವೆಡೆಗಳಲ್ಲಿ ಸಹಜವಾದ ಆದಿಪ್ರಾಸ–ಅನುಪ್ರಾಸಗಳಿಂದ ವಚನದ ಬಂಧವೂ ಅಂದವಡೆದಿದೆ. ಆಯಾ ಭಾವದ ಒತ್ತಡವನ್ನು ಈ ಪ್ರಾಸಾನುಪ್ರಾಸಗಳು ಪರಿಣಾಮಕಾರಿಯಾಗಿ ನಿರ್ವಹಿಸಿವೆ. ಮುಂದಿನ ವಚನಗಳನ್ನು ಈ ದೃಷ್ಟಿಯಿಂದ ಪರೀಕ್ಷಿಸಬಹುದು.

ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ,
ಕೊಡು ದೇವ ಎನ್ನ ಕೈಯಲ್ಲೊಂದು ಕರಿಕೆಯ;
'ಮೃಡದೇವಾ ಶರಣೆಂ'ದು ಭಿಕ್ಷಕ್ಕೆ ಹೋದರೆ, ಅಲ್ಲಿ,
'ನಡೆದೇವಾ' ಎಂದೆನಿಸು ಕೂಡಲಸಂಗಮದೇವಾ.

ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ;
ಜಲವೊಂದೇ ಶೌಚಾಚಮನಕ್ಕೆ;
ಕುಲವೊಂದೇ ತನ್ನ ತಾನರಿದವಂಗೆ;
ಫಲವೊಂದೇ ಷಡುದರುಶನ ಮುಕ್ತಿಗೆ;
ನಿಲವೊಂದೇ ಕೂಡಲಸಂಗಮದೇವಾ, ನಿಮ್ಮನರಿದಂಗೆ.

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ !

ಮಾಡುವ ನೀಡುವ ನಿಜಗುಣವುಳ್ಳರೆ
ಕೂಡಿಕೊಂಬ ನಮ್ಮ ಕೂಡಲಸಂಗಮದೇವ.

ಅದುರಿತು ಪಾದಾಘಾತದಿಂದ ಧರೆ;
ಬಿದಿರಿದುವು ಮುಕುಟ ತಾಗಿ ತಾರಕೆಗಳು;
ಉದುರಿದವು ಕೈತಾಗಿ ಲೋಕಂಗಳೆಲ್ಲಾ;
ನಮ್ಮ ಕೂಡಲಸಂಗಮದೇವನಿಂದು ನಾಟ್ಯವಾಡೆ.

ಬೇರೆ ಬೇರೆ ಲಯಗತಿಯಲ್ಲಿ ಸಾಗಿ ವೈವಿಧ್ಯವನ್ನು ತಂದುಕೊಟ್ಟ ವಚನಗಳೂ ಉಂಟು.

ಶಿವಭಕ್ತನಾಗಿ ತನ್ನ ಹಿಡಿದಹನೆಂದು ಹೋದರೆ
ನುಗ್ಗು ಮಾಡುವ, ನುಸಿಯ ಮಾಡುವ,
ಮಣ್ಣು ಮಾಡುವ, ಮಸಿಯ ಮಾಡುವ
ಕೂಡಲಸಂಗಮದೇವರ ನೆರೆ ನಂಬಿದನಾದರೆ
ಕಡೆಗೆ ತನ್ನಂತೆ ಮಾಡುವ.

ಸಾಲುಗಳು ಒಂದಕ್ಕೊಂದು ತೂಕ ಹಿಡಿಯುವಂತೆ ಒದಗುವ ಪ್ರಾಸ, ಸ್ವಾಭಾವಿಕವಾದ ಯತಿಗಳಿಂದ ಒದಗುವ ನಾಟಕೀಯತೆ ಗಮನಾರ್ಹವಾದುದು:

ಕಲ್ಲ ನಾಗರ ಕಂಡರೆ ಹಾಲನೆರೆಯೆಂಬರು;
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ!
ಉಂಬ ಜಂಗಮ ಬಂದರೆ ನಡೆಯೆಂಬರು;
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ.

ಒಮ್ಮೊಮ್ಮೆ ವಚನಗಳಲ್ಲಿಯ ಕೆಲವು ಸಾಲುಗಳು ಗಣಗಳಿಗೆ ಒಳಪಟ್ಟು ಪದ್ಯದ ತುಣುಕಿನಂತೆ ಗೋಚರಿಸುತ್ತವೆ :

ಷಡುತ್ರಿಂಶತ್ ಪ್ರಭಾ ಪಟಲದ ಪ್ರಭೆಯ ಬೆಳಗಿದೆ ನೋಡಿರೆ
(೩–೪ ಮಾತ್ರೆಯ ಗಣಗಳಾಗಿ ಇದನ್ನು ವಿಭಾಗಿಸಬಹುದು)
ಉಣ್ಣದೆ ಉಡದೆ ಹೊಗೆಯ ಕೈಯಲ್ಲಿ ಸತ್ತ ಅಣ್ಣಗಳ ಕೇಡ ನೋಡ
(೫ ಮಾತ್ರೆಯ ನಿರ್ಬಂಧಕ್ಕೆ ಬದಲಾಗಿ ಆಡುಮಾತಿನ ಲಯಕ್ಕೆ ತಿರುಗಿಸಿಕೊಂಡ ಸೊಗಸನ್ನು ಗಮನಿಸಿ).
ಕೊಳನ ತಡಿಯಲ್ಲೊಂದು ಹೊರಸು ಕುಳ್ಳಿರ್ದರೇನು ?

(೫ ಮಾತ್ರೆಯ ಮೂರು ಗಣ, ಹಾಗೂ ೩ ಮಾತ್ರೆಯ ಎರಡು ಗಣಗಳ ಮುಗಿತಾಯ.)

ಹೀಗೆ ಭಾವದ ಓಟಕ್ಕೆ ನಡೆಗೆ ತಕ್ಕಂತೆ ಲಯದ ಗತಿಯನ್ನು ವಚನಗಳಲ್ಲಿ ಗುರುತಿಸಬಹುದು. "ವಚನಗಳ ಲಯ ಮೇಲೆ ಕಣ್ಣಿಗೆ ಕಾಣುವಷ್ಟು ಸ್ಥೂಲವಾಗಿಯಾಗಲಿ, ಕಿವಿಗೆ ಕೇಳುವಷ್ಟು ಘನವಾಗಿಯಾಗಲಿ ಇರದೇ ಹೆಚ್ಚು ಸೂಕ್ಷ್ಮವಾಗಿಯೇ ಇರುತ್ತದೆ[೧] ಎಂಬುದನ್ನು ಕಂಡುಕೊಂಡ ದಿ. ಬಸವನಾಳರು ಅರ್ಥಕ್ಕೆ ಅನುಕೂಲವಾಗುವ ತೆರದಲ್ಲಿ ಬಸವಣ್ಣನವರ ವಚನಗಳನ್ನು ಮುದ್ರಿಸಿ ಒಳ್ಳೆಯ ಮಾದರಿಯನ್ನು ಹಾಕಿಕೊಟ್ಟಿದ್ದಾರೆ. "ಹೊಸಗನ್ನಡ ಛಂದಸ್ಸಿನ ಅನೇಕ ವೈಶಿಷ್ಟ್ಯಗಳು ಆ ವಚನಗಳಲ್ಲಿ ತಕ್ಕಮಟ್ಟಿಗೆ ದೊರೆಯುತ್ತವೆ"[೨] ಎಂದು ಡಾ.ಎಂ. ಚಿದಾನಂದಮೂರ್ತಿಯವರು ಅಭಿಪ್ರಾಯಪಟ್ಟಿರುವದು ಸರಿಯಾಗಿದೆ. "ವಚನಗಳನ್ನು ಗದ್ಯ ಪದ್ಯಗಳ ಮಧ್ಯದ ಇನ್ನೊಂದು ಜಾತಿಯ ಬರೆಹವೆಂದು ಭಾವಿಸಬೇಕಾಗುತ್ತದೆ"ಂಬುದೇನೋ ನಿಜ. ಆದರೆ "ಅವುಗಳನ್ನು ಲಯಾನ್ವಿತ ಗದ್ಯವೆಂದೋ ಅನಿಶ್ಚಿತ ಲಯವಿರುವ ಪದ್ಯವೆಂದೋ"[೩] ಕರೆದುಬಿಟ್ಟರೆ ಪೂರ್ಣ ಸ್ವರೂಪವನ್ನು ನಿಶ್ಚಯಿಸಿದಂತಾಗುವುದಿಲ್ಲ. ಈ ವಚನ ಪ್ರಕಾರಕ್ಕೆ ತನ್ನದೇ ಆದ ವಿಶಿಷ್ಟ ಸ್ವರೂಪವಿರುವುದರಿಂದ ಇವುಗಳ ರಚನಾ ವಿಧಾನ ಭಾವ–ಆಲೋಚನೆಗಳಿಗೆ ತಕ್ಕ 'ಶಿಲ್ಪ' (Structure) ವೊಂದನ್ನು ನಿರ್ಮಿಸಿದೆ. ಇಂದಿನ ಕಾವ್ಯಕ್ಕೆ ಒಗ್ಗಿರುವ ಆಡುಮಾತಿನ ಲಯ (Speech-rhythm) ವಚನಗಳಲ್ಲಿ ಪ್ರಧಾನವಾಗಿರುವುದನ್ನು ಸಂಸ್ಕಾರಗೊಂಡ ಕಿವಿ ತಟ್ಟನೆ ಗ್ರಹಿಸಬಲ್ಲುದು. ಅನುಭವೋಕ್ತಿಯ ಮುತ್ತುರತ್ನಗಳನ್ನು ಹೇರಿಕೊಂಡು ಭಾವದ ಗಾಳಿಗೆ ಗದ್ಯದ ಹಾಯಿಯನ್ನು ಬಿಚ್ಚಿ ಪದ್ಯದ ತೆರೆಗಳ ಮೇಲೆ ಸಡಗರದಿಂದ ಸಾಗಿದ ಈ ಚಿಕ್ಕ ಚಿಕ್ಕ ಹಡಗುಗಳ ಬೆಡಗಿಗೆ ಮನಸೋಲದವರಾರು? ಅಂತೂ 'ವಚನ' ಕನ್ನಡದ ವಿಶಿಷ್ಟವಾದ ಸಾಹಿತ್ಯ ಪ್ರಕಾರ ಎನ್ನುವಲ್ಲಿ ಸಂದೇಹವಿಲ್ಲ.

ಅನುಭವದ ಆಳದಿಂದ ಮೂಡಿಬಂದು ತಕ್ಕ ಉಕ್ತಿಯಲ್ಲಿ ರೂಪುಗೊಂಡ ಅನೇಕ ಸೂಕ್ತಿಗಳು ಬಸವಣ್ಣನವರ ವಚನಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ವಚನಗಳ ಬಂಧದಲ್ಲಿ ಅಂದವಡೆದ ಈ ಸೂಕ್ತಿಗಳು ಸಂಕ್ಷಿಪ್ತವಾಗಿಯೂ, ಸಾರವತ್ತಾಗಿಯೂ ಇದ್ದು ಆಯಾ ಸಂದರ್ಭದ ಅರ್ಥವಂತಿಕೆಯನ್ನೂ

---

೧. 'ಬಸವಣ್ಣನವರ ಷಟ್‌ಸ್ಥಲದ ವಚನಗಳು' ಪ್ರಸ್ತಾವನೆ, ಪುಟ XXVII

೨. 'ಸಂಶೋಧನ ತರಂಗ' ಪುಟ:೨೦೪

೩. ಅದೇ ಪುಟ: ೧೯೦

ರಸವಂತಿಕೆಯನ್ನೂ ಹೆಚ್ಚಿಸುವುವಲ್ಲದೆ ಸ್ವತಂತ್ರ ನುಡಿಗಳಾಗಿಯೂ ಇವು ಮೆರೆಯಬಲ್ಲವು. ಆಚಾರ–ವಿಚಾರ, ನಡೆ–ನುಡಿ, ಬಾಳು–ಬದುಕು, ಭಯ–ಭಕ್ತಿ, ರೀತಿ–ನೀತಿ, ಒಳಿತು–ಕೆಡುಕು, ಗುಣ–ದೋಷ, ಭಾವ–ಅನುಭವ, ನಯ–ವಿನಯ ಇತ್ಯಾದಿ ಮಾನವ ಜೀವನದ ಹಲವಾರು ವಿಷಯಗಳ ಮಂಥನದಿಂದ ಇವು ಮೂಡಿಬಂದಿದ್ದು ತಟ್ಟನೆ ಮನಸ್ಸನ್ನು ಸೆರೆ ಹಿಡಿಯುತ್ತವೆ; ಅನುಭವದ ಸ್ವಂತಿಕೆಯಿಂದ ಮಿನುಗುತ್ತವೆ. ಒಂದು ಭಾವವನ್ನು ಒತ್ತುಗೊಟ್ಟು ಬಿಂಬಿಸಬೇಕಾದಾಗ ಇಡಿಯ ವಚನವೇ ಅಂಥ ಸೂಕ್ತಿಗಳಿಂದ ರೂಪುಗೊಂಡಿರುವುದುಂಟು. ಅಲ್ಲದೆ ಅವೆಲ್ಲವೂ ಪ್ರಶ್ನಾರ್ಥಕವಾಗಿದ್ದರೂ ನಿಷೇಧಾರ್ಥವನ್ನು ಪರಿಣಾಮಕಾರಿಯಾಗಿ ಸೂಚಿಸುತ್ತವೆ, ಶರಣರನ್ನು ಪುಣ್ಯವಿಲ್ಲದಲೆ ಕಾಣಲಾಗದೆಂಬ ಭಾವವನ್ನು ಸೂಚಿಸುವಾಗ:

**ಕಾಣಬಹುದೆ ಪರುಷದ ಗಿರಿಯಂಧಕಂಗೆ?**
**ಅರಿಯಬಹುದೇ ರಸದ ಭಾವಿ ನಿರ್ಭಾಗ್ಯಂಗೆ?**
**ತೆಗೆಯಬಹುದೇ ಕಡವರವು ದರಿದ್ರಂಗೆ?**
**ಕರೆಯಬಹುದೇ ಕಾಮಧೇನುವಶುದ್ಧಂಗೆ?**
**ಹೊನ್ನ ಹುಳವ ಕಂಡು ನರಿ ತನ್ನ ಬಾಲವ**
**ಹುಣ್ಣ ಮಾಡಿಕೊಂಡರೆ ಹೋಲಬಹುದೆ?**
**ಎನ್ನೊಡೆಯ ಕೂಡಲ ಸಂಗನ ಶರಣರನು**
**ಪುಣ್ಯವಿಲ್ಲದೆ ಕಾಣಬಹುದೆ?**

ಒಳ್ಳೆಯ ಸ್ಥಾನ–ಸಂದರ್ಭಗಳ ಸಂಪರ್ಕ ಒದಗಿಬಂದರೂ ಸ್ವಭಾವ ಬದಲಾಗದು ಎಂಬುದನ್ನು ಪ್ರತಿಪಾದಿಸುವಾಗ :

**ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ ?**
**ಕೋಡಗ ಬಲ್ಲುದೆ ಸೆಳೆಮಂಚದ ಸುಖವ?**
**ಕಾಗೆ ನಂದನ ಬನದೊಳಗಿರ್ದರೇನು**
**ಕೋಗಿಲೆಯಾಗಬಲ್ಲುದೆ? ಹೇಳಾ,**
**ಕೊಳನ ತಡಿಯಲ್ಲೊಂದು ಹೊರಸು ಕುಳ್ಳಿರ್ದರೇನು,**
**ಗಳಹಂಸೆಯಾಗಬಲ್ಲುದೆ ಕೂಡಲಸಂಗಮದೇವಾ?**

ಮನಃಪೂರ್ವಕವಾದ ನಿಷ್ಠೆಯಿಂದ ಸಾಧನೆಗೈದ ಶರಣರ ನಿಲವನ್ನು ತೋರಿಕೆಯ ಶುಷ್ಕವಾದ ಆಚಾರ ಇಟ್ಟುಕೊಂಡ ಕಾಮಿಗಳು ಅರಿಯಲಾರರು ಎಂಬುದನ್ನು ವಿವರಿಸುವಾಗ ಇಂಥ ಸೂಕ್ತಿಗಳೇ ದೃಷ್ಟಾಂತಗಳಾಗಿ ನಿಲ್ಲುವದುಂಟು.

ಏತ ತಲೆವಾಗಿದರೇನು? ಗುರುಭಕ್ತನಾಗಬಲ್ಲುದೆ?
ಇಕ್ಕುಳ ಕೈ ಮುಗಿದರೇನು? ಭೃತ್ಯಾಚಾರಿಯಾಗಬಲ್ಲುದೆ?
ಗಿಳಿಯೋದಿದರೇನು? ಲಿಂಗವೇದಿಯಾಗಬಲ್ಲುದೆ?
ಕೂಡಲಸಂಗನ ಶರಣರು ಬಂದ ಬರವ ನಿಂದ ನಿಲವ
ಅನಂಗಸಂಗಿಗಳೆತ್ತ ಬಲ್ಲರು ?

ಪ್ರಶ್ನೆಗೆ ಪ್ರಶ್ನೆಯನ್ನೊಡ್ಡಿ ನಿಷೇಧಾರ್ಥವನ್ನು ಹೊರಹೊಮ್ಮಿಸುವ ತೂಕದ ವಾಕ್ಯರಚನಾ ಸಾಮರ್ಥ್ಯಕ್ಕೂ ಇದು ಉತ್ತಮ ಉದಾಹರಣೆಯಾಗಿದೆ.

ಹೆಚ್ಚಿನ ಸೂಕ್ತಿಗಳೂ ವಚನದ ಭಾಗವಾಗಿದ್ದು ಪದ್ಯದ ಸಾಲುಗಳಂತೆ ಅಲ್ಲಲ್ಲಿ ಆದಿ, ಅಂತ್ಯ, ಅನುಪ್ರಾಸ ಸಹಿತವಾಗಿ ಒಡಮೂಡಿವೆ. ಕೆಲವನ್ನಿಲ್ಲಿ ನೋಡಬಹುದು:

ನೀನೊಲಿದರೆ ಕೊರಡು ಕೊನರುವುದಯ್ಯಾ,
ನೀನೊಲಿದರೆ ಬರಡು ಹಯನಹುದಯ್ಯಾ.

*

ಎನಗೆ ನಿಮ್ಮ ನೆನಹಾದಾಗಲೇ ಉದಯ:
ಎನಗೆ ನಿಮ್ಮ ಮರಹಾದಾಗಲೇ ಅಸ್ತಮಾನ.

*

ತನುವಿನ ಕೋಪ ತನ್ನ ಹಿರಿಯತನದ ಕೇಡು
ಮನದ ಕೋಪ ತನ್ನರುಹಿನ ಕೇಡು.

*

ಕಲಿಯ ಕೈಯ ಕೈದುವಿನಂತಿರಬೇಕು, ಅಯ್ಯಾ.
ಎಲುದೋರ ಸರಸವಾಡಿದರೆ ಸೈರಿಸಬೇಕಯ್ಯ.

*

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ
ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯ

*

ಅರಸರ ಕಂಡು ತನ್ನ ಪುರುಷನ ಮರೆದರೆ
ಮರವೇರಿ ಕೈ ಬಿಟ್ಟಂತಾಯಿತಯ್ಯಾ.

*

ಆಯುಧವಿಕ್ಕಿದ ಮೇಲೆ ವೀರದ ಮಾತೇಕೆ ?
ಸತ್ಯನಲ್ಲದವನಿಗೆ ನಿತ್ಯ ನೇಮವೇಕೆ?

*

ಹರನೀವ ಕಾಲಕೆ ಸಿರಿಯು ಬೆನ್ನಲಿ ಬಕ್ಕು
ಹರಿದು ಹೆದ್ದೊರೆಯ ಕೆರೆ ತುಂಬಿದಂತಯ್ಯಾ.

*

ಮಾಡಿದೆನೆಂಬುದು ಮನದಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ.

*

ಗರಿ ತೋರೆ ಗಂಡರೆಂಬವರ ಕಾಣೆ:
ನಿರಿ ಸೋಂಕಲು ಮುನಿಯಿಲ್ಲ ನೋಡಯ್ಯಾ.

*

ಕೊಲುವೆನೆಂಬ ಭಾಷೆ ದೇವನದು
ಗೆಲುವೆನೆಂಬ ಭಾಷೆ ಭಕ್ತನದು!

*

ಆಯುಷ್ಯ ತೀರಿದಲ್ಲದೆ ಮರಣವಿಲ್ಲ
ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ.

*

ಆನೆಯು ಆ ದಾರಿಯಲ್ಲಿ ಹೋಯಿತ್ತೆಂದಡೆ
ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ?

*

ಕಿಚ್ಚಿನ ಕಣಜದಲ್ಲಿ ಬೀಜವ ತುಂಬಿ
ಬಿತ್ತುವ ದಿನಕ್ಕರಸಿದುದುಂಟೆ?

*

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ
ಹಿಡಿದಿರ್ದ ಲಿಂಗ ಘಟಸರ್ಪದಂತೆ.

*

ಹರಸಿ ಮಾಡುವುದು ಹರಕೆಯ ದಂಡ
ನೆರಹಿ ಮಾಡುವುದು ಡಂಬಿನ ಭಕ್ತಿ.

*

ಅನಂತಕೋಟಿ ಸನ್ಮಾನವ ಮಾಡಿದರೇನು ?
ನಿಮಿಷದ ಉದಾಸೀನ ಕೆಡಿಸಿತ್ತು.

*

ವೀರನಾದರೆ ವೈರಿಗಳು ಮೆಚ್ಚಬೇಕು,
ವ್ರತಿಯಾದರೆ ಅಂಗನೆಯರು ಮೆಚ್ಚಬೇಕು,
ಭಕ್ತನಾದರೆ ಜಂಗಮ ಮೆಚ್ಚಬೇಕು.

*

ಬಯಲ ರೂಪ ಮಾಡಬಲ್ಲಾತನೆ ಶರಣ;
ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ.

*

ಮುನ್ನೂರರುವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪುದೆ ಸಿಂಪು?
ಅದು ಸ್ವಾತಿಗಲ್ಲದೆ ಬಾಯ್ದೆರೆಯದು.
ಹುತ್ತಕ್ಕೆ ಏಸು ಬಾಯಾದರೇನು? ಸರ್ಪನಿಪ್ಪುದು ಒಂದೆ ಸ್ಥಾನ.

ಇನ್ನು ಕೆಲವು ಒಂದೇ ವಾಕ್ಯದಲ್ಲಿ ಘನೀಭೂತವಾಗಿ ನಿಷೇಧಾರ್ಥವನ್ನು ಪರಿಣಾಮಕಾರಿಯಾಗಿ ಸೂಚಿಸುವ ಪ್ರಶ್ನೆರೂಪದಲ್ಲಿವೆ: ಅವುಗಳಲ್ಲಡಗಿದ ವ್ಯಂಗ್ಯ ಭಾವವನ್ನೂ ಅಲ್ಲಲ್ಲಿ ಗಮನಿಸಬೇಕು:

*

ಮಸಿಯನೇಸು ಕಾಲ ಬೆಳಗಿದರೆ ಬಿಳಿದಾಗಬಲ್ಲುದೆ?

*

ತೊತ್ತಿಂಗೇಕೆ ಲಕ್ಷಣ? ಬಂಟಂಗೇಕೆ ಆಚಾರ?

*

ಗುರುಗುಂಜಿ ಮಾಣಿಕಕ್ಕೆ ಸರಿಯಪ್ಪುದೆ?

*

ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನೋ?

*

ಅರ್ಥರೇಖೆಯಿದ್ದಲ್ಲಿ ಫಲವೇನು, ಆಯುಷ್ಯರೇಖೆಯಿಲ್ಲದನಕ್ಕ?

*

ತಲೆಯಿಲ್ಲದಟ್ಟೆಗೆ ಪಟ್ಟವ ಕಟ್ಟುವ ಉಭಯ ಭ್ರಷ್ಟರ ಮೆಚ್ಚುವನೆ?

*

ನಗುತಲಿರಿದುಕೊಂಡರೆ ಅಲಗು ನೆಡದಿಹುದೆ?

*

ಕರುಳ ಕಲೆ ಪ್ರಕಟಿತವುಂಟೆ?

*

ಮಾಲೆಗಾರನ ಕೇಳೀ ನನೆ ಅರಳುವುದೆ?

*

ನಾಯಿಗೆ ನಾರಿವಾಣವಕ್ಕುವದೆ?

*

ಮಣ್ಣಮರನುಳಿದು ತೋರುವ ಹಣ್ಣು ರುಚಿಯುಂಟೆ?

*

ಖಂಡುಗ ಹಾಲೊಳಗೆ ಒಂದು ಇದ್ದಲಿ ಬಿದ್ದರೇನೋ?
ಬಿಳುಪಾಗಬಲ್ಲುದೆ ?

*

ಹೇಡಿ ಬಿರುದ ಕಟ್ಟಿದರೆ ದರ್ಪಣದೊಳಗಲ್ಲದೆ?
ಅಂಬರಚಾಪ ಮುಗಿಲೊಳಗೆ ಹೊಂದಿತ್ತೆ?
ಬೇರೊಂದರಲ್ಲಿ ನಿಂದಿತ್ತೆ?

*

ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿದರೆ
ವೆಚ್ಚವೇನು ಹತ್ತುವುದು ?

ಒಳಪ್ರಾಸದಿಂದಲೂ ತೂಕಬದ್ಧವಾದ ವಾಕ್ಯರಚನೆಯಿಂದಲೂ, ಹಿತಮಿತವಾದ ಪದಗಳ ಬಳಕೆಯಿಂದಲೂ ಅನುಭವದ ಅಚ್ಚಿನಲ್ಲಿ ಎರಕ ಹೊಯ್ದಂತಿವೆ ಇನ್ನು ಕೆಲವು ನುಡಿಗಳು. ಅವುಗಳ ಮೇಲೆ ಬಸವಣ್ಣನವರ ಗಾಢ ಚಿಂತನೆಯ ಮುದ್ರೆಯಿದೆ:

ಕೊಲುವನೆ ಮಾದಿಗ ಹೊಲಸು ತಿಂಬುವನೇ ಹೊಲೆಯ.

*

ಆಚಾರವೆಂಬುದು ಹಾವಸೆಗಲ್ಲು

*

ಕಾಯಕವೇ ಕೈಲಾಸ.

*

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ.

*

ಬಂದರೊಂದು ಲೇಸು, ಬರದಿದ್ದರೊಂದು ಲೇಸು.

*

ಆಚಾರವೇ ಸ್ವರ್ಗ, ಅನಾಚಾರವೇ ನರಕ.

*

'ಅಯ್ಯಾ' ಎಂದಡೆ ಸ್ವರ್ಗ, 'ಎಲವೋ' ಎಂದಡೆ ನರಕ.

*

ಸದುವಿನಯವೇ ಸದಾಶಿವನ ಒಲುಮೆಯಯ್ಯಾ.

*

ದಯವೇ ಧರ್ಮದ ಮೂಲವಯ್ಯಾ.

*

ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ.

*

ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ.

*

ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಬಾರದು.

*

ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಣಬಾರದು.

*

ಮರಣವೇ ಮಹಾನವಮಿ.

*

ನಂಬಿದರೆ ಪ್ರಸಾದ; ನಂಬದಿದ್ದರೆ ವಿಷವು

*

ಒಲ್ಲೆನೆಂಬುದು ವೈರಾಗ್ಯ; ಒಲಿವೆನೆಂಬುದು ಕಾಯಗುಣ.

*

ಶಿವಾಚಾರವೆಂಬುದು ಬಾಳಬಾಯಧಾರೆ.

*

ಮುತ್ತು ಉದುಕದಲಾಗದು, ಉದುಕ ಮುತ್ತಿನಲಾಗದು.

*

ಅರಿದರೆ ಶರಣ: ಮರೆದರೆ ಮಾನವ.

*

ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು.

*

ಸೂಕ್ತಿಗರ್ಭಿತ ವಚನಗಳನ್ನು ನೋಡಿದಂತೆ, ಗಾದೆಗಳು ತೋರಣದಂತೆ ಕೋದುಕೊಂಡ ವಚನಗಳೂ ಇವೆ. ಬಸವಣ್ಣನವರು ಜನವಾಣಿಯಿಂದ ಪಡೆದ ಕಾಣಿಕೆಗಳಲ್ಲಿ ಅರ್ಥಗರ್ಭಿತವಾದ ಗಾದೆ, ಮಾತಿನ ಪ್ರಯೋಗವೂ ಒಂದಾಗಿದೆ. ಉಪಮೆ, ಉತ್ಪ್ರೇಕ್ಷೆ, ವಿರೋಧಾಭಾಸ, ಹಾಸ್ಯ, ವ್ಯಂಗ್ಯ, ಪ್ರಾಸ–ಅನುಪ್ರಾಸ, ನಾಟಕೀಯ ನುಡಿಚಿತ್ರ ಇತ್ಯಾದಿ ಗುಣಲಕ್ಷಣಗಳಿಂದ 'ಗಾದೆ'ಯೂ ಒಂದು ಸಾಹಿತ್ಯಪ್ರಕಾರವೇ ಆಗಿದೆ. ಇವುಗಳ ಸಮುಚಿತವಾದ ಪ್ರಯೋಗದಿಂದ ವಚನಗಳ ಪ್ರಾಸಾದಿಕತೆ, ಕಾವ್ಯದ ಕಮನೀಯತೆ ಹೆಚ್ಚಿದೆ. ಇದರಿಂದ ಭಾಷೆಯಲ್ಲಿ ಉಂಟಾದ ಸಹಜ ಚಮತ್ಕೃತಿಯನ್ನೂ ಇಲ್ಲಿ ಗಮನಿಸಬಹುದಾಗಿದೆ.

ದೇವರು ಕಾಡಿ ನೋಡುವುದಕ್ಕೆ ಮಿತಿಯಿಲ್ಲದೆ ಹೋದರೆ ಸೈರಿಸುವುದೆಂತು?

**ಹಗಹದಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ?**
**ಕೋಳದ ಮೇಲೆ ಸಂಕಲೆಯನಿಕ್ಕುವರೆ?**
**ಬೆಂದ ಹುಣ್ಣ ಕಂಬಿಯಲಿ ಕೀಸುವರೆ?**
**ಕೂಡಲಸಂಗಯ್ಯನ ಕಾಡುವ ಕಾಟ**
**ಸಿರಿಯಾಳಂಗಲ್ಲದೆ ಸೈರಿಸಬಹುದೆ?**

ಇಲ್ಲಿಯ ಗಾದೆ ನುಡಿ ಒಂದಕ್ಕಿಂತ ಒಂದು ಪರಿಣಾಮಕಾರಿಯಾಗಿ ಕಾರುಣ್ಯ ಭಾವವನ್ನು ಮನಸ್ಸಿನಲ್ಲಿ ಮುದ್ರಿಸಿಬಿಡುತ್ತದೆ.

ಭಕ್ತ ಮಾಡಿದರೆ ಮನಸ್ಸು ತುಂಬಿ ಮಾಡಬೇಕು. ಇಲ್ಲವಾದರೆ ಅವನ ಬಾಳೇ ಕೊನೆಗೊಂಡಂತೆ:

**ಚೇಳಿಂಗೆ ಬಸುರಾಯಿತ್ತೆ ಕಡೆ; ಬಾಳೆಗೆ ಫಲವಾಯಿತ್ತೆ ಕಡೆ, ನೋಡಾ!**
**ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೆ ಕಡೆ!**
**ಮಾಡುವ ಭಕ್ತಂಗೆ ಮನಹೀನವಾದರೆ ಅದೇ ಕಡೆ,**
**ಕೂಡಲಸಂಗಮದೇವಾ.** (ಬ.ಷ.ವ.)

ಗಾದೆಯನ್ನು ದೃಷ್ಟಾಂತದಂತೆ ಸುಂದರವಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ.

ಬಸವಣ್ಣನವರ ಗಾಢವಾದ ಜಂಗಮಪ್ರೇಮ ಮುಂದಿನ ವಚನದಲ್ಲಿ ಮೂಡಿರುವ ಗಾದೆಗಳಿಂದ ಪುಟಗೊಂಡಿದೆ:

**ಅರಸು ಮುನಿದರೆ ನಾಡೊಳಗಿರಬಾರದಯ್ಯಾ**
**ಗಂಡ ಮುನಿದರೆ ಹೆಂಡತಿಗೆ ಇರಬಾರದಯ್ಯಾ**
**ಕೂಡಲಸಂಗಮದೇವಯ್ಯಾ.**
**ಜಂಗಮ ಮುನಿದರೆ ನಾನೆಂತು ಬದುಕುವೆ?**

ವಚನಗಳಲ್ಲಿ ಅಲ್ಲಲ್ಲಿ ಉಪಯೋಗಿಸಿದ ಗಾದೆ ಮಾತುಗಳನ್ನು ಆರಿಸಿ ನೋಡಿದಾಗ ಅವುಗಳಲ್ಲಿ ಬಹುಪಾಲು ಇಂದಿಗೂ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಬಳಕೆಯಲ್ಲಿರುವುದು ಕಂಡುಬರುತ್ತದೆ. ಅವರ ಕಾಲದಲ್ಲಿ ಜನರ ಮಾತಿನಲ್ಲಿ ರೂಢವಾಗಿದ್ದ ಗಾದೆಗಳೇ ಅನುವರಿತು ಅರ್ಥಪೂರ್ಣವಾಗಿ ಬಸವಣ್ಣನವರ ವಚನ ರಚನೆಯಲ್ಲಿ ಸೇರಿಕೊಂಡಿರುವಂತೆ ತೋರುತ್ತದೆ. ಇನ್ನು ಕೆಲವಕ್ಕೆ ಅವರ ಅನುಭವವೇ ಕಮ್ಮಟವಾಗಿರಲೂಬಹುದು. ಅವುಗಳ ವೈವಿಧ್ಯವನ್ನು ನೋಡಿ:

ಹೊನ್ನ ಹುಳವ ಕಂಡು ನರಿ ತನ್ನ ಬಾಲವ
ಹುಣ್ಣ ಮಾಡಿಕೊಂಡರೆ ಹೋಲಬಹುದೆ?

('ಹುಲಿಯ ಬಣ್ಣಕ್ಕೆ ನರಿಯು ಮೈ ಸುಟ್ಟುಕೊಂಡಿತು' ಎಂಬ ಗಾದೆಯನ್ನು ಇಲ್ಲಿ ನೆನೆಯಬಹುದು.)

ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ.

*

ಸಂತವಿದ್ದ ಮನೆಗೆ ಕೊಂತವ ತಂದಂತೆ

*

ಹೆಂಡದ ಮಡಕೆಯ ಹೊರಗೆ ತೊಳೆದಂತೆ

*

ಬೆರಣಿಯನಾಯಲಲ್ಲದೆ ಅಟ್ಟುಣ್ಣ ತೆರೆಹಿಲ್ಲ

*

ನಡುವಿರುಳೊಳೆದ್ದ ಕುರುಡಂಗೆ ಅಗಸೆಯಲ್ಲಿ ಬೆಳಗಾದಂತೆ

*

ಹೊತ್ತಾರೆಯೆದ್ದ ಕುರುಡಂಗೆ ಅಗಸೆಯಲ್ಲಿ ಅಸ್ತಮಾನವಾದಂತೆ

*

ಕಾಣಿಯ ಲಾಭ ಕೋಟಿಯ ಲಾಭವ ಕೆಡಿಸಿತ್ತು

*

ಹೊರಿಸಿಕೊಂಡು ಹೋದ ನಾಯಿ, ಮೊಲನೇನ ಹಿಡಿವುದಯ್ಯಾ?

*

ಬಡವನ ಕೋಪ ದವುಡಿಗೆ ಮೃತ್ಯುವಾದಂತೆ.

('ಬಡವನ ಸಿಟ್ಟು ದವಡೆಗೆ ಮೂಲ' ಎಂದು ಈಗ ರೂಢಿಯಲ್ಲಿದೆ.)

ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ?

*

ಕುದುರನೇಸು ತೊಳೆದರೆಯೂ ಕೆಸರು ಮಾಣ್ಬುದೆ?

*

ಒಡೆಯರೊಡವೆಯ ಕೊಂಡರೆ ಕಳ್ಳಂಗಳಲಾಯಿತ್ತು

*

ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ?

*

ಮುತ್ತು ನೀರಲಿ ಹುಟ್ಟಿ ಮತ್ತೆ ನೀರಪ್ಪುದೆ?

*

ಬಳ್ಳಿಗೆ ಕಾಯಿ ದಿಮ್ಮಿತ್ತೆ?

*

ಊರ ಸೀರೆಗೆ ಅಗಸ ತಡಬಡಿಹಡೆದಂತೆ

*

ಮುಂಗಯ್ಯ ಕಂಕಣಕೆ ಕನ್ನಡಿಯ ತೋರು

*

ಕೆರೆಯ ನೀರನುಂಡು ತೊರೆಯ ನೀರ ಹೊಗಳು.

*

ಹಾವು ಸಾಯದಂತೆ ಕೋಲು ನೋಯದಂತೆ ಮಾಡು

('ಹಾವು ಸಾಯಬಾರದು, ಕೋಲು ಮುರಿಯಬಾರದು' ಎಂಬುದು ಈಗಿನ ರೂಪ.)

*

ಸಾವಿರನೋಂಪಿಯ ನೋಂತು ಹಾದರದಲ್ಲಿ ಅಳಿದಂತಾಗು

*

ಇಲಿಗಂಜಿ ಮನೆಯ ಸುಡುವರುಂಟೆ

*

ಹಾಲಲ್ಲದ್ದು, ನೀರಲ್ಲದ್ದು

ಕನ್ನಡದ ಆಡು ಮಾತಿನ ಕಸುವನ್ನು, ಕೆಚ್ಚನ್ನು ಪಂಪನನ್ನು ಮೊದಲುಗೊಂಡು ನಮ್ಮ ಮಹತ್ವದ ಕವಿಗಳಲ್ಲಿ ಕೆಲವರಾದರೂ ಬಲ್ಲವರಾಗಿದ್ದರು. ಕಾವ್ಯದ ಭಾಷೆಗೂ

ಜನರು ಆಡುವ ಭಾಷೆಗೂ ನಡುವೆ ಕಂದರವುಂಟಾಗಿ ಎರಡಕ್ಕೂ ಜೀವ ಸಂಬಂಧವೇ ತಪ್ಪಿಹೋಗುವ ಸ್ಥಿತಿ ಒದಗಿದಾಗ ಜನತೆಯ ಭಾಷೆಯಲ್ಲಿ ಅಡಗಿರುವ ಜೀವನಿಧಿಯನ್ನು ಕಂಡು ಎಲ್ಲ ಬಗೆಯ ಭಾವಾಭಿವ್ಯಕ್ತಿಗೂ ಅದನ್ನು ಬಾಗಿಸಿಕೊಂಡು, ಅಂತರಂಗದ ಎಂಥ ಭಾರವನ್ನೂ ಹೊತ್ತು ನೀಗಿಸಿಕೊಂಡು ಹೋಗುವಂತೆ ಅದನ್ನು ದುಡಿಸಿದ ಶ್ರೇಯಸ್ಸು ಬಸವಣ್ಣನವರಿಗೂ ವಚನಕಾರರಿಗೂ ಸಲ್ಲುತ್ತದೆ. "ದೇವವಾಣಿಗೆ ಜನವಾಣಿಯಾಗುವುದು ಅಸಾಧ್ಯವಾದಾಗ ಜನವಾಣಿಯನ್ನೇ ದೇವವಾಣಿಯ ಮಟ್ಟಕ್ಕೇರಿಸಿದ ಪವಾಡ ವೀರಶೈವ ವಚನಕಾರರದು."[೧] ಎಂಬ ಮಾತಿನಲ್ಲಿ ಸಂದೇಹವೇ ಇಲ್ಲ. ವಚನಕಾರರು ಹಿಡಿದ ಈ ಬೆಳಕಿನ ಪಂಜನ್ನು ಮುಂದೆ ಕವಿಗಳಲ್ಲಿ ಧೀರರಾದವರು ತಮ್ಮ ಕೈಗೆ ತೆಗೆದುಕೊಂಡು ತಮ್ಮ ಕಾವ್ಯ ಸೃಷ್ಟಿಯನ್ನು ಉಜ್ವಲಗೊಳ್ಳುವಂತೆ ಮಾಡಿದರು. ಹರಿಹರ, ರಾಘವಾಂಕ, ಚಾಮರಸ, ಕುಮಾರವ್ಯಾಸ, ರತ್ನಾಕರವರ್ಣಿ, ಸರ್ವಜ್ಞ ಮೊದಲಾದ ಕವಿಗಳ ಕೃತಿಗಳಲ್ಲಿ ಈ ಬಗೆಯ ಶಕ್ತಿಯ ಸಂಚಾರ ನಿರಂತರವಾಗಿ ನಡೆದಿರುವುದನ್ನು ಕಾಣುತ್ತೇವೆ.[೨] ಆಡು ನುಡಿಯ ಶಕ್ತಿಯನ್ನೂ ಸೌಂದರ್ಯವನ್ನೂ ಬಸವಣ್ಣನವರು ಬಗೆದುಂಬಿ ಭಾವಿಸಿದ್ದರೆಂಬುದನ್ನು ಅವರ ವಚನಗಳಲ್ಲಿ ಹೆಜ್ಜೆಹೆಜ್ಜೆಗೆ ಕಾಣುತ್ತೇವೆ. ಅವರು

---

೧. ಶ್ರೀ ಶಿ.ಶಿ. ಬಸವನಾಳ: 'ಬಸವಣ್ಣನವರ ಷಟ್‌ಸ್ಥಲದ ವಚನಗಳು' ಪ್ರಸ್ತಾವನೆ, ಪುಟ:ii.

2. One does not know how heavy the grip of the past would have been on the natural development of Kannada, and what a yawning gap would have opened out between the literary and the spoken forms of the language, if the life of the Kannada people had pursued an even tenor without a mass movement in religion in the 12th century. in that case, the language of the scholars, the princely courts and the poets which Old Kannada had now come to be, would have led a sheltered existence in books, cutting itself away more and more from the common people. But happily for the real progress of Kannada that was to be. The Virashaiva reformist movement led by such great figures as Basaveshwara and Allama Prabhu swept over the country, particularly in the North Karnataka area. It has a genuine mass appeal and made good use of the speech of the people as its medium. out of the fullness of Shivasharanas' hearts the Vachanas poured forth, embodied in soul stirring language. The lead that men of religion gave, the poets followed."

T.N.Srikantiah *'The Kannada Language through the Ages' pages 179-180. 'Karnataka Darshan' 1955.*

ಬಳಸಿರುವ ಪದಪುಂಜಗಳಲ್ಲಿ ಪಡೆನುಡಿ–ಹಿಡಿನುಡಿಗಲ್ಲಿ ಅದು ಚೆಲ್ಲುವರಿದಿದೆ. ಅಂಥ ಕೆಲವು ನುಡಿಕಟ್ಟುಗಳ ಸವಿಕಟ್ಟನ್ನು ಇಲ್ಲಿ ನೋಡಬಹುದು:

ಹಲುದೋರೆ ಕೊಯ್ಯು; ಗುಡಿತೋರಣಕಟ್ಟು; ಕಿವಿವಿಡಿದಾಡು; ಬಾಯ ತಂಬುಲ ಮೆಲು, ಬೀಳುಡಿಗೆಯ ಹೊದೆ; ಪಾದರಕ್ಷೆಯ ಕಾದು ಬದುಕು; ಹಾಸಲುಂಟು, ಹೊದೆಯಲುಂಟು; ಹೊಳ್ಳಕುಟ್ಟಿ ಕೈ ಹೊಟ್ಟೆಯಾಗು; ಮಾತಿನಂತೆ ಮನವಿಲ್ಲದ ಜಾತಿಡೊಂಬರು; ಒಣಗಿಸಿ ಘಣಘಣಲನೆ ಮಾಡು; ಒಂದನಾಡಹೋಗಿ ಒಂಬತ್ತ ನಾಡು; ಕೊಂಬ ಮೆಟ್ಟಿ ಕೂಗು; ಒಂದಡಕೆಗೆ ಕೊಳ್ಳು. ಹೊಯ್ದರೆ ಹೊಯ್ಗಳು ಕೈಯಮೇಲೆ, ಬಯ್ದರೆ ಬೈಗಳು ಕೈಯಮೇಲೆ; ದಂದಣದತ್ತಣ ಎನ್ನು; ಮೂಗಿನ ಮೇಲಣ ಕತ್ತಿ; ಮುಖದಲ್ಲಿ ಕಟ್ಟಿದ ಕನ್ನಡಿ; ಎಲುದೋರೆ ಸರಸವಾಡು; ನಡು ನೀರಲ್ಲದ್ದು; ಮೆಟ್ಟಿ ಹುಡಿ ಹೊಯ್ಯು; ಮೀಸಲು ಬೀಸರವಾಗು; ಸೆರಗೊಡ್ಡಿ ಬೇಡು; ಕಾಣುತ್ತ ಕಡೆಗಣಿಸಿ ಅರಸು; ಇದಿರಿಟ್ಟು ತೋರು; ಈ ಕಯ್ಯಲೆ ಸುಖ, ಈ ಕಯ್ಯಲೆ ದುಃಖ, ಬಾಯಲ್ಲಿ ಬಾಲಹುಳಗಳು ಸುರಿ; ಮುಂಡಿಗೆಯನಿಕ್ಕು; ಕರಕಟ ಕಾಡು; ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕು; ಬರಬರ ಅರೆಯಾಗು; ಟೀವಕ ಟಿಂಬಕವನಾಡಿಸು; ಬಿಳಿನೀರ ನೆರೆ ಬಾಯ ಟೊಣೆ; ಸುಳಿದೆಗೆದು ಬೆಳೆ.

ಅಂತರ ಬೆಂತರ; ವಾಮ–ಕ್ಷೇಮ; ಬಚ್ಚರಿ; ಕೆಮ್ಮನೆ ಕೆಡು; ದರದುರ; ಜಜ್ಜನೆಜರಿ, ಬಿಬ್ಬನೆಬಿರಿ; ಬೆಬ್ಬನೆ ಬೆರೆ; ಒಕ್ಕುದನಿಕ್ಕು; ಜಗಜಗ; ನಾಯಕ ನರಕ; ಆಗು–ಚೇಗು; ಕೀರ್ತಿ ವಾರ್ತೆ, ಡಂಬು ಡಳಹು.

ಕೆಲವು ಪದಗಳು ಇಂದು ಬಳಕೆಯಲ್ಲಿಲ್ಲದಿದ್ದರೂ ಅವುಗಳನ್ನು ಮತ್ತೆ ಚಲಾವಣೆಗೆ ತಂದು ನಮ್ಮ ಶಬ್ದ ಭಂಡಾರವನ್ನು ಬೆಳೆಸಿಕೊಳ್ಳಬಹುದಾಗಿದೆ.

ಅಟ್ಟಾಟಿಕೆಯ ಮಾತು (ಅತಿಶಯೋಕ್ತಿ; ಅಟ್ಟದ ಆಟದಲ್ಲಿ ಆಡುವ ಮಾತಿನ ರೀತಿಯಿಂದ ಇದು ಬಂದಿರಬಹುದು); ಹುದುವಾಳು (ಕೂಡಿಕೊಂಡು ಬಾಳು); ಹೊರಹಂಚೆ (ಹೊರಗಿನ ಬಣ್ಣದ ಮೆರುಗು); ಒಳಬೊಳ್ಳೆತನ (ಒಳಗೆ ಟೊಳ್ಳಾಗಿರುವಿಕೆ); ಬಳಿದೊತ್ತು, ಬಳಗದೊತ್ತು, ವಂಶದೊತ್ತು; ಬೋಹರಿಗೆ (ಕಸಬರಿಗೆ); ಉಪ್ಪರ (ಉಬ್ಬು, ಎತ್ತರ; ಉತ್ತರ ಕರ್ನಾಟಕದಲ್ಲಿ ಈಗಲೂ ಈ ಶಬ್ದವು ಇಂದು ಬಳಕೆಯಲ್ಲಿದೆ); ಹಣೆದ (ಹೊಡೆದಾಟ); ಆರತವಡಗು (ಆಶೆಹರಿ); ಸಂಬೋಳಿ (ಎಚ್ಚರಿಕೆಯಿಂದಿರು; 'ಸಂಬಾಳಿಸು' ಎಂಬ ಪದ ಈಗ ಬಳಕೆಯಲ್ಲಿದೆ.) ಒಕತನ (ಒಗೆತನ); ಮೂಕೊರತಿ; ಹೆಣಮೂಳ; ಓಜುಗಟ್ಟಿಗೆ (ಶಿಕ್ಷಕರ ಬೆತ್ತ)– ಇತ್ಯಾದಿ.

ಬಸವಣ್ಣನವರ ಪ್ರತಿಭೆಯಿಂದ ರೂಪುಗೊಂಡ ಕೆಲವು ಪದ, ಪದಪುಂಜಗಳೂ ಇವುಗಳಲ್ಲಿರಬಹುದು. ಉದಾ: ಶಬ್ದಮುಗ್ಧ; ಶಬ್ದಸುಖಿ; ಲಜ್ಜೆಭಂಡ; ತಪ್ಪುಕ (ತಪ್ಪು ಮಾಡಿದವ), ಕಾಟುಗ (ಕಾಡುವವ) ಕೆತ್ತುಗ, (ನಾಶಮಾಡುವವ), ಪೋಲುಗ (ಹಾಳು ಮಾಡುವವ), ಮೂಲಿಗ (ಮೂಲಪುರುಷ), ನಗೆಮೊಗದರಸ; ಬಸುರ ಬಾಳುವೆ (ಹೊಟ್ಟೆಪಾಡು), ಮಾನಿಸಗಳ್ಳೆ, ಹುಸಿಯ ಮಸಕ, ಶಿವನ ಸೊಮ್ಮು, ತೊತ್ತುಗೆಲಸ, ಭಕ್ತಿಲಂಪಟ, ದಿಟಪುಟ ಭಕುತಿ ಸಂಪುಟ, ಭಾವನಿಂದೆ, ನಾಯಿತನ, ಅಳಿಯಾಸೆ, ಲೋಕವಿಗುರ್ಭಣೆ, ಕೇಡಿಲ್ಲದ ಪದವಿ, ಮಾತಿನ ಬಣಬೆ, ಕಳನೇರಿ ಕಾದು, ಚೆನ್ನಗೆಯ್ಯ, ಸಕಲಪಡಿಪದಾರ್ಥ, ಬೆಳಗಿನೊಳಗಣ ಬೆಳಗು, ಎಡಹುಗುಳಿ, ವಿಪರೀತಚರಿತ, ರತ್ನಮೌಕ್ತಿಕದಚ್ಚು ಇತ್ಯಾದಿ.[೧]

ಸಂಸ್ಕೃತ ಪದಗಳ ಬಳಕೆ ಇವರ ವಚನಗಳಲ್ಲಿ ತೀರಾ ವಿರಳ. ಹಾಗೆ ಬಳಸಿದಾಗಲೂ ಸಂದರ್ಭಕ್ಕೆ ತಕ್ಕಂತೆ, ಭಾವಕ್ಕೆ ತಕ್ಕ ವಾತಾವರಣವನ್ನು ಸೃಷ್ಟಿಸುವ ಕಾರ್ಯವನ್ನು ಈ ಸಮಾಸ ಪದಗಳು ನಿರ್ವಹಿಸುತ್ತವೆ:

**ಶತಪತ್ರ ಕಮಳ ಕರ್ಣಿಕಾ ಮಧ್ಯದಲ್ಲಿ**
**ಸ್ವತಃ ಸಿದ್ಧನಾಗಿರ್ಪ ನಮ್ಮ ಕೂಡಲಸಂಗಮದೇವ.**

*

**ಅಷ್ಟದಳ ಕಮಳಾತ್ಮದೊಳಗೆ ನೆಟ್ಟನೆ ಮನಃಪ್ರೇರಕ**

*

**ಸೂರ್ಯಕೋಟಿ ಪ್ರಭೆಯ ಬೆಳಗಿನ ಸಮಸ್ತ ಕಿರಣಗಳ**
**ಅಗ್ರಪಟಲದ ಬೆಳಗು ಕೂಡಲಸಂಗಮದೇವ.**

*

**ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ ಅಕ್ಷಯನಗಣಿತನುದಿ**
**ಜಲಕೂರ್ಮ ನಾಗ ಮೇದಿನಿ ಸಪ್ತ ಸಾಗರ**
**ಅಜಾಂಡ ಭಾಂಡ ಹರಿವಿರಂಚಿಗಳು**
**ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯಾ**

ಜ್ಞಾನಜ್ಯೋತಿ ಧ್ಯಾನದಿಂದ ನಾಳಶುದ್ಧ ದ್ವಾರನಾಗಿ ಆರಾಧಿಸಿ ಕಂಡೆ ನಮ್ಮ ಕೂಡಲಸಂಗಮದೇವನ

---

೧. ಇಂಥ ಇನ್ನೂ ಕೆಲವು ಶಬ್ದರೂಪಕಗಳನ್ನು ಶ್ರೀ ಬಿ.ಸಿ. ಜವಳಿಯವರು ತಮ್ಮ 'ಧರ್ಮಭಂಡಾರಿ ಬಸವಣ್ಣನವರು' ಗ್ರಂಥದಲ್ಲಿ ಸಂಗ್ರಹಿಸಿ ವಿವೇಚಿಸಿದ್ದಾರೆ. ಪುಟ:೨೫೪.

ಕೂಡಲಸಂಗಮದೇವನ ಗುಣವಿಶೇಷಗಳ ವರ್ಣನೆಯ ಸಂದರ್ಭದಲ್ಲಿ ಮಾತ್ರ ಈ ಬಗೆಯ ಸಂಸ್ಕೃತ ಪದಗಳನ್ನು ಪ್ರಯೋಗಿಸಿರುವುದು ಗಮನಾರ್ಹವಾಗಿದೆ. ಒಟ್ಟಿನಲ್ಲಿ ಬಸವಣ್ಣನವರ ವಚನಗಳ ಶೈಲಿ ಅಚ್ಚಗನ್ನಡದ ಕೆಚ್ಚಿನಿಂದ ಬಿಗಿವೊಂದಿದೆ. ವಿಷಯವು ಗಹನವಿದ್ದಾಗಲೂ ಅದರ ಗಂಭೀರತೆ ಕೆಡದಂತೆ ಅದು ಹಾಗೆ ನೋಡಿಕೊಳ್ಳುತ್ತದೆಂಬುದನ್ನು ಗಮನಿಸಿ;

**ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುರಿದು**
**ತುಟಿಮಿಡುಕದೆ ಅಟ್ಟಯಾಡಿತ್ತಲ್ಲಾ;**
**ಬಿಟ್ಟ ಕಣ್ಣು ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ,**
**ಕಟ್ಟುಗುಡಿಯ ಕೂಡಲಸಂಗಮದೇವ ಹಿಡಿವಡೆದ!**

ನಿಜದ ಬದುಕಿನ ನಿಷ್ಠೆ, ಅಂತರಂಗ ಬಹಿರಂಗ ಸಮನ್ವಯ ಸಾಧನೆ, ಸಮಾಜ ಜೀವನದ ಸೂಕ್ಷ್ಮ ನಿರೀಕ್ಷಣೆ, ಶರಣ ಜೀವನದ ಸಮುಜ್ವಲ ಚಿತ್ರ, ಹೃದಯದ ಔದಾರ್ಯದಲ್ಲಿ ಒಗಮಿಗುವ ಮಾನವೀಯತೆಯ ನರುಗಂಪು, ಬೆಳಗಿಂಗೆ ಬೆಳಗು ಸಿಂಹಾಸನವಾಗಿ, ಬೆಳಗು ಬೆಳಗ ಕೂಡಿದ ಕೂಟದ ಜೀವಂತದರ್ಶನ ಹೀಗೆ ಹಲವಾರು ಸಂಗತಿಗಳು ವಚನ ಮಾಧ್ಯಮಗಳಲ್ಲಿ ಅರಳಿ ಅಭಿವ್ಯಕ್ತಿಗೊಂಡಿರುವ ರೀತಿ ಅಚ್ಚರಿಗೊಳಿಸುವಂತಿದೆ.

ವಚನಗಳನ್ನು ಬಿಡಿಬಿಡಿಯಾಗಿ ನೋಡಿದಾಗ ಸಾಹಿತ್ಯಿಕ ಮೌಲ್ಯದೊಡನೆ ಅವು ಸ್ವಯಂಪೂರ್ಣ ಕಲಾಕೃತಿಗಳಾಗಿ ಕಂಗೊಳಿಸುವುದಂತೂ ಸರಿಯೆ. ಆದರೆ ಬಸವಣ್ಣನವರ ಎಲ್ಲ ವಚನಗಳನ್ನು ಒಟ್ಟಾಗಿ ಓದಿಕೊಂಡು ಬಂದಂತೆ ಅವರ ಜೀವನದ ಮಹಾಕಾವ್ಯವನ್ನೋದಿದ ಅನುಭವ ನಮಗಾಗುತ್ತದೆ. ಈ ವಚನ ಶಿಲ್ಪದ ಮೂಲಕ ಅವರು ತಮ್ಮ ವ್ಯಕ್ತಿತ್ವವನ್ನೇ ಕಂಡರಿಸಿ ಕೃತಾರ್ಥರಾಗಿದ್ದಾರೆ.

*

*(ಕಾವ್ಯಾನುಸಂಧಾನ : ೧೯೭೧)*



೫



# ವಚನಸಾಹಿತ್ಯದಲ್ಲಿ ಉಪಮೆ

ಸಾಹಿತ್ಯವನ್ನು ಸಾಮಾನ್ಯ ಜನತೆಗೂ ನಿಲುಕುವಂತೆ ತಂದಿರಿಸಿದ ಶ್ರೇಯಸ್ಸು ಕನ್ನಡದಲ್ಲಿ ಪ್ರಥಮವಾಗಿ ವಚನಕಾರರಿಗೆ ಸಲ್ಲುತ್ತದಷ್ಟೆ. ವಚನಕಾರರಲ್ಲಿ ಅನೇಕ ಬಗೆಯ ಕಾಯಕಗಳನ್ನು ಕೈಕೊಂಡವರಿದ್ದು ಅವರು ತಮ್ಮ ಆಲೋಚನೆಗಳನ್ನು, ಆಧ್ಯಾತ್ಮಿಕ ಚಿಂತನೆಗಳನ್ನು, ಭಾವಲಹರಿಗಳನ್ನು ವಚನರೂಪಕ್ಕಿಳಿಸುವಾಗ ಸಹಜವಾಗಿ ತಮ್ಮ ತಮ್ಮ ಕಾಯಕಕ್ಕೆ ಸಂಬಂಧಿಸಿದ ವಿಶಿಷ್ಟ ಶಬ್ದ, ಪದಸಮುಚ್ಚಯಗಳನ್ನೂ ಉಪಮೆಗಳನ್ನೂ ಬಳಸಿದ್ದಾರೆ. ಹಿಂದೆ ಕಾವ್ಯಗಳಲ್ಲಿ ಕಾಣಬರುತ್ತಿದ್ದ ಮಾಮೂಲಿ ಉಪಮೆಗಳನ್ನು ವಚನಕಾರರು ಬಹುಮಟ್ಟಿಗೆ ತ್ಯಜಿಸಿ, ತಮ್ಮ ಸುತ್ತಮುತ್ತಲಿನ ಜನಜೀವನದಿಂದ ನೇರವಾಗಿ ನುಡಿಚಿತ್ರಗಳನ್ನು ಎತ್ತಿಕೊಂಡಿರುವುದರಿಂದ ಓದುಗರ ಮನಸ್ಸನ್ನು ಬಹು ಬೇಗ ಅವು ಸೂರೆಗೊಳ್ಳುತ್ತವೆ. ಭಾವಗೀತೆಗಳಲ್ಲಿಯ ಕವಿಯ ವ್ಯಕ್ತಿತ್ವನಿರೂಪಣೆ ವಚನಗಳಲ್ಲಿಯೂ ಸಾಕಷ್ಟು ಕಂಡುಬರುತ್ತವೆ. ಗದ್ಯದ ಉಡಿಗೆಯನ್ನೂ ಪದ್ಯದ ನಡಿಗೆಯನ್ನೂ ಮೇಳವಿಸಿಕೊಂಡು ಭಾವಲಹರಿಗೆ ತಕ್ಕಂತೆ ತೊನೆಯುತ್ತ ಸಾಗುವ ಅದರ ಆಕೃತಿಯೇ ಅಷ್ಟೊಂದು ಮನಸೆಳೆಯುವಂತಿದೆ. ಅಲ್ಲಮಪ್ರಭು ವಿನಂತಹ 'ವ್ಯೋಮಮೂರುತಿ'ಯ ಬುದ್ಧಿಯ ಮಿಂಚನ್ನು ಅದು ಕಿರಿದಾದ ಬೆಡಗಿನ ನುಡಿಯಲ್ಲಿ ಹಿಡಿದಿದ್ದರೆ ಬಸವಣ್ಣನವರ ಭಕ್ತಿಭಾವಕ್ಕೆ ಗೊನೆವಾಳೆಯಂತೆ ಬಾಗಿದೆ; ಚೆನ್ನಬಸವಣ್ಣನವರ ಜ್ಞಾನಕ್ಕೆ ಮಸೆದ ಅಲಗಿನಂತೆ ಹೊಳೆದಿದೆ; ಸಿದ್ಧರಾಮನ ಕರ್ಮಕ್ಕೆ ಗುದ್ದಲಿ ಹಿಡಿದು ಸಿದ್ಧವಾಗಿದೆ. ಅಕ್ಕಮಹಾದೇವಿಯ ಕಾವ್ಯವಾಣಿಗೆ ಗಿರಿಯ ನವಿಲಿನಂತೆ ಕುಣಿದಿದೆ, ಕೋಗಿಲೆಯಂತೆ ಹಾಡಿದೆ.

ಇಂಥ ವಚನಸಾಹಿತ್ಯದ ಒಂದಂಗವಾಗಿ ಅದರಲ್ಲಿ ಬರುವ ಉಪಮೆಗಳ ಸೊಗಸನ್ನು ಸಹಜತೆಯನ್ನು, ಮಾರ್ಮಿಕತೆಯನ್ನು, ಚಿತ್ರಕತೆಯನ್ನು, ಅವುಗಳ ಪರಿಣಾಮ ರಮಣೀಯತೆಯನ್ನು ಈ ಚಿಕ್ಕ ಲೇಖನದಲ್ಲಿ ಕಂಡುಕೊಳ್ಳಲು ಹವಣಿಸಲಾಗಿದೆ. "ವಚನ ಸಾಹಿತ್ಯದಲ್ಲಿ ಒಟ್ಟಾರೆ ಕಂಡುಬರುವ ಮುಖ್ಯ ಅಥವಾ ವಿಶೇಷ ಲಕ್ಷಣಗಳನ್ನೆಲ್ಲ ಒಂದೆಡೆ ಕಾಣಬೇಕೆಂದರೆ, ಅವೆಲ್ಲ ಸಮಗ್ರವಾಗಿ ಗೋಚರವಾಗುವುದು ಬಸವಣ್ಣನವರ ವಚನಗಳಲ್ಲಿಯೇ"[೧] ಆದುದರಿಂದ ಮುಂದೆ ನಿರೂಪಿಸಿದ ಉದಾಹರಣೆಗಳನ್ನೆಲ್ಲ ಬಸವಣ್ಣನವರ ವಚನಗಳಿಂದಲೇ ಎತ್ತಿಕೊಳ್ಳಲಾಗಿದೆ.

ಮನಸ್ಸಿನಲ್ಲಿ ಒಡಮೂಡುವ ಭಾವವನ್ನು ಸ್ಫುಟಗೊಳಿಸಲು, ಮನದಟ್ಟು ಮಾಡಿಕೊಡಲು ಉಪಮೆ ಹೆಚ್ಚಿನ ಕಾರ್ಯವನ್ನು ನಿರ್ವಹಿಸುತ್ತದೆ. ಮುಂದೆ ಕಾಣಿಸಿದ ಉಪಮೆಗಳು ವಾಸ್ತವಿಕತೆಯಿಂದ ನಮ್ಮ ಮನಸ್ಸಿನಲ್ಲಿ ನಾಟಿ ನಿಲ್ಲುತ್ತವೆ.

ಮನಸ್ಸಿನ ಹೊಯ್ದಾಟಕ್ಕೆ, ಚಂಚಲತೆಗೆ 'ಅಂದಣವನೇರಿದ ಸೊಣಗನಂತೆ ಕಂಡೊಡೆ ಬಿಡದು ತನ್ನ ಮುನ್ನಿನ ಸ್ವಭಾವವನ್ನು' ಎಂದಿದ್ದಾರೆ ಬಸವಣ್ಣನವರು. ನಾಯಿಯನ್ನು ಒಂದು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರೆಸಿದರೂ ದಾರಿಯಲ್ಲಿ ಅದು ಮತ್ತೊಂದು ನಾಯಿಯನ್ನು ಕಂಡರೆ ತನ್ನ ಮುನ್ನಿನ ಸ್ವಭಾವಕ್ಕನುಸರಿಸಿ ಬೊಗಳದೆ ಬಿಡದು; ಕೆಳಗೆ ಎಲುಬಿನ ತುಂಡು ಬಿದ್ದಿದ್ದರೆ ಜಿಗಿದು ಹೋಗಿ ಅದನ್ನು ಕಡಿಯದೆ ಬಿಡದು. ಹಾಗೆಯೇ ಮನಸ್ಸನ್ನು ಎಷ್ಟು ಉಚ್ಚವಿಚಾರದಲ್ಲಿ ತೊಡಗಿಸಲು ಯತ್ನಿಸಿದರೂ ಅದು ಮತ್ತೆ ಹೊಯ್ದಾಡುವುದೇ. ಅದಕ್ಕಾಗಿ ಈ 'ನಾಯಿತನ'ವ ಮಾಣಿಸು ಎಂದು ಅವರು ಮೊರೆಯಿಟ್ಟಿದ್ದಾರೆ. ಮನಸ್ಸಿನಲ್ಲಿ ದೃಢವಿಲ್ಲದೆ ಪೂಜಿಸಿ, ಧ್ಯಾನಿಸಿ ಏನು ಫಲ? 'ನಿದಾನವ ಕಾಯ್ದಿರ್ದ ಬೆಂತರನಂತೆ' ಅದರ ವಿಧಿ. ನಿಧಿಯನ್ನು ಕಾಯಬೇಕೆಂದು ಹಾಯುವುದಷ್ಟೆ. ಅದರ ಬೆಲೆಯಾಗಲಿ, ಮಹತ್ವವಾಗಲಿ ಅದಕ್ಕೆ ಗೊತ್ತಾಗದು. ಒಳಿತಾದುದನ್ನು ತನ್ನಂತೆ ಕೆಡಿಸುವ ಹವಣಿಕೆಯಲ್ಲಿಯೇ ಮನಸ್ಸು ಮಗ್ನವಾಗಿರುತ್ತದೆ. 'ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ' ಎಂಬ ಮಾತಿನ ಯಥಾರ್ಥತೆಯನ್ನು ಬೇರೆ ಬಣ್ಣಿಸಬೇಕಿಲ್ಲ. ಮೊದಲೇ ಭಕ್ತಿಭಾವವಿಲ್ಲ, ಅದರಲ್ಲಿ ಈ ಬಡಮನಸ್ಸು ಬೇರೆ ಕಾಡುತ್ತದೆ. ಅದರ ಪರಿಣಾಮ 'ಇಲ್ಲವೆಯ ಮೇಲೆ ಕಂಚೊಡೆದಂತೆ'ಯೇ ಸರಿ. ಮೊದಲೇ ಬರಿಗೈ, ಇದ್ದ ಒಂದು ಕಂಚಿನ ತಾಬಂಡಿಯೂ ಒಡೆದು ಹೋದಂತೆ. ಇಂಥ ಮನಸ್ಸಿಗೆ ಅವರು ದೈನ್ಯವಾಗಿ ಕೇಳಿಕೊಳ್ಳುತ್ತಾರೆ :

"ಬೆಲ್ಲವ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ ಮನವೆ; ಕಬ್ಬ ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೆ; ಗಗನವನಡರಿದ ಕಾಗೆಯಂತೆ ದೆಸೆದೆಸೆಗೆ ಹಂಬಲಿಸದಿರಾ ಮನವೆ".

ಮನದ ಪರಿಯೇ ಹಾಗಾದರೆ ಇರವಿನ ಪರಿ ಅದಕ್ಕೂ ಶೋಚನೀಯ. 'ಕಪ್ಪೆ ಸರ್ಪನ ನೆಳಲಲಿಪ್ಪಂತೆ' ಈ ಬಾಳು. ಇಲ್ಲಿ ನೆಳಲಿದೆ. ತಂಪಿದೆ, ಸುಖವಿದೆ. ಆದರೆ ಅದು ಮೃತ್ಯುವಿಗಧೀನವಾಗಿದೆ. ಅಂಥ ಸ್ಥಿತಿಯಲ್ಲಿದ್ದರೂ ಅದನ್ನೇ ನೆಚ್ಚಿ ಮೆಚ್ಚಿ ಕುಳಿತಿದ್ದಾನೆ ಮಾನವ.

**'ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಶೆ ಮಾಡುವಂತೆ.**
**ಶೂಲಕ್ಕೇರುವ ಕಳ್ಳ ಹಾಲು ತುಪ್ಪವ ಕುಡಿದು ಮೇಲೇಸು ಕಾಲ ಬದುಕುವನೋ!**
**ಕೆಡುವ ಒಡಲನ್ನು ನೆಚ್ಚಿ, ಕಡು ಹುಸಿದು ಒಡಲ ಹೊರೆವವನನ್ನು**
**ಕೂಡಲಸಂಗಮದೇವ ಮೆಚ್ಚಲಾರ.'**

ಸಂಸಾರದಲ್ಲಿರುವವರೆಗೆ ನನ್ನದು ತನ್ನದು ಎಂದು 'ಊರ ಸೀರೆಗೆ ಅಗಸ ತಡಬಡಿ ಹಡೆದಂತೆ' ಕಾತರಗೊಳ್ಳುವುದೇ ಆದರೂ ಇಲ್ಲಿ ಒಂದು ಹಿಡಿತದಿಂದ ತನ್ನತನವನ್ನು ಕಾಯ್ದುಕೊಂಡು ಜೀವಿಸಲಿಕ್ಕೂ ಅವಕಾಶವಿದೆ. 'ನಾನಾ ವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ'. 'ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ' ತೋರಿಕೆಯ ಸುಖದಲ್ಲಿ ಮೈಮರೆತರೆ ಅದರಿಂದ ಇನ್ನಿಷ್ಟು ದುಃಖವೇ ಒದಗುತ್ತದೆ. 'ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ' ನಾನು ತಾನೆಂದು ಕಾಯವಿಕಾರ ಮನೋವಿಕಾರಗಳು ಜಗ್ಗಾಡುತ್ತವೆ. ಬಾಳಿನಲ್ಲಿ ಪರಸ್ಪರ ಸ್ನೇಹ ಅವಶ್ಯ. ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ ಇದ್ದರೇನು, ಹೋದರೇನು 'ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ' ಯಾವ ಉದ್ದೇಶವೂ ಈಡೇರುವಂತಿಲ್ಲ.

ಇರುವಿನಲ್ಲಿ ಮರೆತು ಮಾನವನಾಗಿ ದುಃಖಭಾಗಿಯಾಗದೆ ಅರಿತು ಶರಣನಾಗಬೇಕಾದರೆ ಭಕ್ತಿಭಾವ ಅತ್ಯವಶ್ಯ. ಭಕ್ತಿಯ ಮಾತು ಬಂದಾಗಲೆಲ್ಲ ಬಸವಣ್ಣನವರ ಮುಗ್ಧ ಹೃದಯವೇ ನಮ್ಮೆದುರು ನಿಲ್ಲುತ್ತದೆ. ಆ ಸಮಯದಲ್ಲಿ ಅವರು ನುಡಿದದ್ದೆಲ್ಲ ಮುತ್ತಿನ ಹಾರವಾಗಿದೆ. ಮಾಣಿಕ್ಯದ ದೀಪ್ತಿಯಂತೆ, ಸ್ಫಟಿಕದ ಸಲಾಕೆಯಂತೆ ಸದಾಶಿವನ ಒಲುಮೆ. 'ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದರೆ ಬೇಡಿದ ಪದವಿಯನೀವ ಕೂಡಲಸಂಗಮದೇವ'. ಒಳಗೂ ಹೊರಗೂ ಒಂದೇ ತೆರನಾಗಿರಬೇಕು. ನಡೆನುಡಿಗಳಲ್ಲಿ ಹೊಂದಾಣಿಕೆಯಿರಬೇಕು. 'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪದಂತೆ!' ತೋರಿಕೆಯ ಭಕ್ತಿಯಿಂದ 'ಹೆಂಡದ ಮಡಿಕೆಯ ಹೊರಗೆ ತೊಳೆದಂತೆ' ಒಳಗಿನ ಅಶುದ್ಧಿ ಹಾಗೇ ಉಳಿಯುವುದಲ್ಲದೆ, ಡಾಂಭಿಕತನದ ದುರ್ಗುಣವೂ ಬಂದು ಸೇರುತ್ತದೆ. ಸಲೆ ನೆಲೆ ಸನ್ನಿಹಿತನಾಗಿರ್ಪ ಶರಣನ ಭಕ್ತಿ ಒಂದನಾಯತದಿಂದ ಕೆಡುತ್ತದೆ. ಕೋಟಿ ಸನ್ಮಾನವ ಮಾಡಿದರೇನು ನಿಮಿಷದ ಉದಾಸೀನ ಕೆಡಿಸಿತ್ತು. ಅದು ಅಷ್ಟು ಸೂಕ್ಷ್ಮ.

ಒಮ್ಮೆ ಅಕೃತ್ಯವೆಸಗಿದರೂ 'ಹಲವು ಕಾಲ ಧಾವತಿಗೊಂಡು ಒಟ್ಟಿದ ಹಿದಿರೆಯು (ಬಣವೆ?) ಒಂದು ಮಿಡುಕುರದಲ್ಲಿ (ಬೆಂಕಿಯ ಕಿಡಿ) ಬೇವಂತೆ' ಹಾಳಾಗಿ ಹೋಗುತ್ತದೆ. ತತ್‌ಕಾಲ ಪ್ರೇಮವನರಿಯದೆ ವಿಭವಕ್ಕೆ ಮಾಡಿದವನ ಭಕ್ತಿ 'ಇರುಳು ಸತ್ತಿಗೆ ಹಿಡಿಸಿಕೊಂಡಂತೆ' ನಿರುಪಯುಕ್ತ. ಇಂತವರು 'ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು ಮೂಗು ಹಿಡಿದು ಧ್ಯಾನವ ಮಾಡುತ್ತ' ಪೂಜೆ, ಧ್ಯಾನಗಳನ್ನು ತಮ್ಮ ಸ್ವಾರ್ಥಕ್ಕೆ ಸಾಧನವನ್ನಾಗಿ ಮಾಡಿಕೊಳ್ಳುತ್ತಾರೆ. 'ಬೆಳ್ಳೆತ್ತಿನ ಮರೆಯಲ್ಲಿರ್ದು ಹುಲ್ಲಿಗೆ ಅಂಬ ತೊಡುವಂತೆ' ಕುಳ್ಳಿರ್ದಲ್ಲಿ ಲಿಂಗವ ಪೂಜಿಸಿ ಅಲ್ಲದಾಟವನ್ನಾಡುತ್ತಾರೆ. 'ಎಳ್ಳಿಲ್ಲದ ಗಾಣವನ್ನಾಡಿದ ಎತ್ತಿನಂತೆ' ಅವರ ಶ್ರಮವೆಲ್ಲ ವ್ಯರ್ಥ. ಹೇಡಿತನದಿಂದ, ಕೈಲಾಗದುದಕ್ಕೆ ಏನಾದರೂ ಮಾಡಿ ಅದಕ್ಕೆ ಹಿರಿಮೆಯ ಹೆಸರಿಡುತ್ತಾರೆ. 'ಓಡಲಾರದ ಮೃಗವು ಸೊಣಗಂಗೆ ಮಾಂಸವ ಕೊಡುವಂತೆ' ಮಾಡಲಾಗದು ಭಕ್ತನು, ಕೊಳಲಾಗದು ಜಂಗಮ. ತನುವುಕ್ಕಿ ಭಕ್ತಿಯನ್ನು ಮಾಡಬೇಕು, ಮಾಡಿಸಿಕೊಳ್ಳಬೇಕು.

ಪರಮ ನಿರಂಜನನೆ ಮರೆದ ಕಾಲಕ್ಕೆ 'ತುಂಬಿದ ಹರವಿಯ ಕಲ್ಲು ಕೊಂಡಂತೆ' ಇದ್ದದ್ದು ಇಲ್ಲವಾಗುತ್ತದೆ. ವಿಭೂತಿಯನ್ನು ಹೂಸಿ, ರುದ್ರಾಕ್ಷಿಯನ್ನು ಕಟ್ಟಿ, ನಿಷ್ಠೆಯಿಂದ ಪೂಜಿಸಿದಾಗಲೂ ಶಿವನ ಒಲುಮೆ ಆಗದಿದ್ದರೆ ಅಂಥ ಆತುರ, ನೋವು ಬೇರಾವುದೂ ಇಲ್ಲ. 'ಅರಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ' ಎಂಬಲ್ಲಿಯೂ 'ಏನನೋದಿ ಏನ ಕೇಳಿ ಏನ ಮಾಡಿ ಫಲವೇನು ನಿಮ್ಮವರೊಲಿಯದನ್ನಕ್ಕ?', 'ಬಾಳಿಲ್ಲದವಳ ಒಲೆಯಂತಾಯಿತ್ತೆನಗೆ' ಎಂಬ ಮಾತುಗಳಲ್ಲಿಯೂ ಇರುವ ಮಾರ್ಮಿಕತೆಯು ಅತ್ಯಂತ ಪರಿಣಾಮಕಾರಿಯಾದುದು. ಯಾರಾದರೂ ಅಂತಃಕರಣದಿಂದ ಕೇಳಿದರೆ ಅಂಥವರಿಗೆ ಆ ಸ್ಥಿತಿಯನ್ನು ನಿವೇದಿಸಿಕೊಳ್ಳಬಹುದು. 'ಕರಲು ಭೂಮಿಯಲ್ಲಿ ಕರೆದ ವೃಷ್ಟಿಯಂತೆ' ಕೂರದವರಿಗೆ ಹೇಳಿ ಏನು ಪ್ರಯೋಜನ? 'ಅಂಗತವಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತೆ' ನಿಜವಾದ ಸಲುಗೆ ಮೈಗೂಡಿಕೊಂಡಿರದಿದ್ದರೆ ದುಃಖವೇ ಇಲ್ಲದೆ ಬೋರಾಡಿ ಅತ್ತಂತೆ. ಕೆಲವರು ಹೀಗೂ ಇರುತ್ತಾರೆ. ತಾವೂ ಮಾಡರು, ಮಾಡುವವರನ್ನೂ ಮಾಡಗೊಡರು. 'ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಡುವಂತೆ' ಮಾಡುವ ಭಕ್ತರನ್ನು ಕಂಡು ಇವರು ಸೈರಿಸಲಾರರು. ಮೇಲೆ ಮೇಲೆ 'ಒಪ್ಪವ ನುಡಿವರಯ್ಯ ತುಪ್ಪವ ತೊಡೆದಂತೆ' 'ಇಟ್ಟೆಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತೆಂಬಂತೆ' ತಮ್ಮಲ್ಲಿಯೇ ದೋಷವಿದ್ದರೂ ತಮ್ಮ ಮಾತನ್ನೇ ಸಾಧಿಸುತ್ತಾರೆ. ಇಂಥ ಹೊತ್ತಿನಲ್ಲಿ 'ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ, ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ; ಶರಣರ ಬರವನ್ನು ಕಾಯುತ್ತದೆ ಮನಸ್ಸು.

ಶರಣ ಪಥವು ಸುಗಮವಾದುದಲ್ಲ. ಶರಣರು 'ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು". ಅವರ ವಚನಗಳೋ 'ಹಾಲತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳಲು, ತವರಾಜದಂತಹ ನೊರೆತೆರೆಗಳು' ಇದ್ದಂತೆ. ಇದನ್ನರಿಯದೇ ಅತ್ತಿತ್ತ ತಡಕಾಡಿದರೆ, ಹುಡುಕಾಡಿದರೆ 'ಬೇರೆ ಬಾವಿಯ ತೋಡಿ ಉಪ್ಪು ನೀರ ಸವಿದಂತೆ.' ಇಂಥ ಶರಣರು ಬಂದರೆ, ಭೆಟ್ಟಿಯಾದರೆ, ಆಗುವ ಸಂತೋಷವನ್ನು ಯಾವ ಬಾಯಿಂದ ಹೇಳುವುದು! 'ಸಾಸಿವೆಯ ಮೇಲೆ ಸಾಗರವರಿದಂತಾಯಿತ್ತಯ್ಯ' ಎಂಬ ಕಿರುನುಡಿಯಲ್ಲಿಯೇ ಸಕಲವನ್ನು ತುಂಬಿ ಹೇಳಿದ್ದಾರೆ ಬಸವಣ್ಣನವರು. ಒಮ್ಮೆ ಶರಣಪಥವನ್ನನುಸರಿಸಿದ ಮೇಲೆ ಎಂಥ ಪ್ರಸಂಗದಲ್ಲೂ ಸಿದ್ಧವಾಗಿರಬೇಕು. 'ಕಲಿಯ ಕೈಯ ಕೈದುವಿನಂತಿರಬೇಕಯ್ಯ' ಎಲುದೋರ ಸರಸವಾಡಿದರೆ ಸೈರಿಸಬೇಕು. (ಪರಮ ಪತಿವ್ರತೆಗೆ ಗಂಡನೊಬ್ಬನೇ ಇದ್ದಂತೆ ಅವನಿಗೂ ಒಬ್ಬನೇ ದೇವರು.) 'ಕರ್ತಾರನ ಪೂಜಿಸಿ ಕುತ್ಸಿತ ದೈವಕ್ಕೆರಗುವುದು ಕತ್ತೆ ಕುದುರೆಗೆ ಹುಟ್ಟಿದ ವೇಸರ (ಹೇಸರುಗತ್ತೆ)ನಂತೆ' ಎಂದು ಹೇಳಲಿಕ್ಕೂ ಅವರು ಹಿಂಜರಿದಿಲ್ಲ. 'ತುಡುಗುಣಿ ನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗುಳುವಂತೆ' ಪೊಡವಿಗೀಶ್ವರನ ಗರ್ಭಾಸನದೊಳಗಿದ್ದು ಮತ್ತೊಂದು ದೈವುಂಟೆಂದು ಮತಿಹೀನರು ನುಡಿಯುತ್ತಾರೆ. 'ಒಡೆಯನಿಲ್ಲದ ಮನೆಯ ತುಡುಗುಣಿ ನಾಯಿ ಹೊಗುವಂತೆ' ಅವನಿಲ್ಲದ ಮನೆಯ ಶರಣ ಹೊಗನು. ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ. ಮರ್ತ್ಯಲೋಕದಲ್ಲಿಯೇ ದೇವಲೋಕದ ಇರವನ್ನು ಶರಣ ಕಾಣುತ್ತಾನೆ. 'ಸತ್ತು ಬೆರೆಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ' ಬೇರಿನ ಕಡೆಗೇ ಕಬ್ಬಿನ ರುಚಿ ಹೆಚ್ಚು. ತುದಿಯಲ್ಲಿ ಸವುಳು. ದೃಷ್ಟಾಂತದ ಸೊಗಸನ್ನು ಇಲ್ಲಿ ಸವಿದಷ್ಟೂ ಕಡಿಮೆಯೆ.

ಶಿವನ ಕರುಣೆಯೇ ಶರಣರ ಮೇಲೆ ಇಲ್ಲದಿದ್ದರೆ ಮಾಡುವ ನೀಡುವ ಶಕ್ತಿ ಈತನಿಗೆಲ್ಲಿಯದು? ಹಾಗಿದ್ದಲ್ಲಿ 'ಮನೆಯ ತೊತ್ತಲಸಿದೊಡೆ ಒಡತಿ ಮಾಡಿ ಕೊಂಬಂತೆ ನಿನಗೆ ನೀ ಮಾಡಿಕೊ' ಎಂಬ ಸಾತ್ವಿಕ ಕ್ರೋಧವನ್ನು ಬಸವಣ್ಣನವರು ತೋರಿದ್ದಾರೆ. ವಿಶ್ವಂಭರನಾದ ದೇವನನ್ನೇ ಶರಣ ಅಡಗಿಸಿಕೊಂಡಿದ್ದಾನೆ–'ಕರಿಯು ಕನ್ನಡಿಯೊಳಗಡಗಿದಂತೆ' ಕೂಡಲಸಂಗಮದೇವನನ್ನು ಮುಟ್ಟಿ ನೆನೆವ ಸುಖ ಎಂಥದ್ದು. 'ಆಲಿಕಲ್ಲ ಹರಳಿನಂತೆ ಅರಗಿನ ಪುತ್ಥಳಿಯಂತೆ ತನು ಕರಗಿ ನೆರೆವ ಸುಖವ ಏನೆಂಬೆ?' ದೇವರ ನಿಲವನ್ನೂ ಅವರೇ ಬಣ್ಣಿಸಬೇಕು:

'ಉದಕದೊಳಗೆ ಬಚ್ಚಿಟ್ಟ ಬಯಕೆಯ ಕಿಚ್ಚಿನಂತೆ, ನನೆಯೊಳಗಣ ಪರಿಮಳದಂತೆ, ಕನ್ನೆಯ ಸ್ನೇಹದಂತೆ' ಈ ಉಪಮೆಗಳ ಸೌಂದರ್ಯ ಹಂತಹಂತವಾಗಿ ರಸೋತ್ಕರ್ಷವನ್ನು ಉಂಟುಮಾಡುತ್ತದೆ.

ಕೆಲವು ವಚನಗಳಲ್ಲಿ ಉಪಮೆಗಳು ಮಾಲೆಗಟ್ಟಿಕೊಂಡು ಪಂಕ್ತಿ ಪಂಕ್ತಿಯಾಗಿ ಬರುತ್ತವೆ. ಇದರಿಂದ ಆ ಚಿತ್ರ ಮನಸ್ಸಿನಲ್ಲಿ ಅಚ್ಚೊತ್ತಿದಂತಾಗುತ್ತದೆ. ಭಾವಕ್ಕೆ ಇನ್ನಷ್ಟು ಕಾವೇರುತ್ತದೆ. ಈ ವಚನವನ್ನು ನೋಡಿ :

**'ಹಾವಿನ ಹೆಡೆಯ ಕೊಂಡು ಕೆನ್ನೆಯ ತುರಿಸುವಂತೆ**
**ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ**
**ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಾಲೆಯಾಡುವಂತೆ.**
**ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ**
**ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ !'**

ಕೆಲವು ಸಂದರ್ಭಗಳಲ್ಲಿ ಹೋಲಿಕೆಗಳನ್ನು ಕೊಟ್ಟು ಹೇಳುವುದು ಅಸಾಧ್ಯವಾಗುತ್ತದೆ. ಕೂಡಲಸಂಗಮದೇವ ಉಪಮಾತೀತನಲ್ಲವೇ? 'ಆನು ಎನ್ನಂತೆ, ಮನ ಮನದಂತೆ, ಕೂಡಲಸಂಗಮದೇವ ತಾನು ತನ್ನಂತೆ' ಎನ್ನುತ್ತಾರೆ.

ಮೇಲಿನ ನಿರೂಪಣೆಯಲ್ಲಿ ವಚನಗಳಲ್ಲಿ ಉಪಮೆಗಳೇ ಹಾಸುಹೊಕ್ಕಾಗಿ ಬಂದಿವೆ. ಇವೆಲ್ಲವುಗಳಲ್ಲಿಯೂ ಸಾಹಿತ್ಯಾಂಶ, ರಸಾನುಭವವನ್ನುಂಟುಮಾಡುವ ರಮಣೀಯತೆ ಒಂದೇ ಉಚ್ಚಮಟ್ಟದಲ್ಲಿವೆಯೆಂದು ಹೇಳಬರದು. ಆದರೂ ಅಂಥ ಉಪಮೆಗಳು ವಚನಗಳ ಸುಭಗತೆಗೆ ಕಾರಣವಾಗಿವೆ. ಜನತೆಯ ಬದುಕಿಗೆ ಅವು ಸಮೀಪವಾಗಿವೆಯೆಂಬುದೂ ಅವುಗಳ ಒಂದು ವಿಶೇಷವೆಂದೇ ಹೇಳಬಹುದು. ಹಾಗೆ ನೋಡಿದರೆ ಬಸವಣ್ಣನವರ ವಚನರಚನೆಯ ಉಗಮ, ಉದ್ದೇಶ, ಪ್ರಯೋಜನಗಳೇ ಬೇರೆ. ಆದರೂ 'ಸಾಹಿತ್ಯ ಕ್ರೀಡೆಯಿಂದ ದೂರ ನಿಂತೇ ಅವರು ನಮ್ಮ ಸಾಹಿತ್ಯದ ದ್ವಿತೀಯ ನವೋದಯಕ್ಕೆ ಪ್ರೇರಕಶಕ್ತಿಯಾಗಿದ್ದಾರೆ.'[೧]

ವಚನಗಳಲ್ಲಿಯ ಉಪಮೆಗಳ ಸತ್ವವನ್ನು ವಿವರಿಸಲು ಬಸವಣ್ಣನವರ ಅನುಭಾವದ ಹಂದರವನ್ನು ಆಶ್ರಯಿಸುವುದು ಅನಿವಾರ್ಯವಾಯಿತು. "ಭಿತ್ತಿಯಿಲ್ಲದೆ ಚಿತ್ತಾರವುಂಟೆ?"

*(ಸಾಹಿತ್ಯ ಚಿಂತನ : ೧೯೬೬)*



೧. ಕುವೆಂಪು: 'ವಿಭೂತಿ ಪೂಜೆ' – ವಚನಕಾರ ಬಸವೇಶ್ವರರು : ಪುಟ ೩೯

೬



# ವಚನಕಾರ ಆದಯ್ಯನ ವ್ಯಕ್ತಿತ್ವ

೧

ಗುಣದ ಬಲ್ಮೆಯಿಂದಲೂ, ಕರ್ತೃತ್ವಶಕ್ತಿಯಿಂದಲೂ, ತನಗುಂಟಾದ ಅನುಭವವನ್ನು ಲೋಕದ ಜನರಿಗೆ ನೀಡುವ ಉದಾರಭಾವದಿಂದಲೂ ಆ ವ್ಯಕ್ತಿಯ ಒಂದು ವಿಶೇಷತೆ ಉಳಿದವರ ಕಣ್ಣಿಗೂ ಕಟ್ಟಿ ಮನಸ್ಸನ್ನು ಮುಟ್ಟುವ ಸಾಮರ್ಥ್ಯವನ್ನು ಪಡೆಯುತ್ತದೆ. ಅಂಥವರ ಕಾಯ ಕರ್ರನೆ ಕಂದಿದರೇನು, ಮಿರ್ರನೆ ಮಿಂಚಿದರೇನು, ಅವರ ಅಂತರಂಗದ ತೇಜಸ್ಸು ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸಿ, ಅದಕ್ಕೊಂದು ಅಪೂರ್ವ ಕಲೆಯನ್ನು ತಂದುಕೊಡುತ್ತದೆ. ತನ್ನತನದ ಸಾರವೆಲ್ಲ ಈ ವ್ಯಕ್ತಿತ್ವವೆಂಬ ಹೆಸರಿನಲ್ಲಿ ಅಡಗಿದೆ. ಹೀಗೆ ಕೆಲವರ ವ್ಯಕ್ತಿತ್ವ ಉಳಿದವರಿಗೂ ಆಕರ್ಷಣೀಯವಾಗಿ, ಅನುಕರಣೀಯವಾಗಿ, ಪ್ರಭಾವಶಾಲಿಯಾಗಿ ನಿಲ್ಲುತ್ತದೆ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಯಾವುದೇ ರಂಗದಲ್ಲಿಯೂ ಹಲವಾರು ವ್ಯಕ್ತಿಗಳ ವ್ಯಕ್ತಿತ್ವದ ಪ್ರಭಾವ ಜನತೆಯ ಜೀವನದಲ್ಲಿ ಅರಿಯದಂತೆಯೇ ಸೇರಿಹೋಗಿ ಅವರ ಬಾಳಿಗೊಂದು ನಂಬಿಕೆಯನ್ನೂ ಭರವಸೆಯನ್ನೂ ಇನ್ನೂ ಏನೆಲ್ಲ ಮಾರ್ಪಾಡುಗಳನ್ನೂ ಉಂಟುಮಾಡಿರುತ್ತದೆ. ಪ್ರಬಲವಾದ ಹಾಗೂ ಸಮರ್ಥವಾದ, ಪ್ರತಿಭಾ ಪೂರ್ಣ ವ್ಯಕ್ತಿತ್ವವನ್ನು ಪಡೆದ ಅಂತಹ ವ್ಯಕ್ತಿಯೇ ಒಂದು ಶಕ್ತಿಯಾಗಿ, ಒಂದು ಸಂಸ್ಥೆಯಾಗಿ ನಿಂತು ಕಾರ್ಯವನ್ನು ನಿರ್ವಹಿಸುವುದುಂಟು. ಸೂರ್ಯ ಮುಳುಗಿದ ಮೇಲೂ ಅವನ ಹೊಂಬೆಳಕಿನ ಕಾಂತಿ ಎಲ್ಲೆಡೆಗೂ ಪಸರಿಸುವಂತೆ ಅಂತಹ ವ್ಯಕ್ತಿ ಕಣ್ಮರೆಯಾಗಿ ಹೋದರೂ ಅವನ ವ್ಯಕ್ತಿತ್ವದರ್ಶನ ಮುಂದಿನವರಿಗೂ ತನ್ನ ಬೆಳಕನ್ನು ಬೀರುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ನಡೆದ ಧಾರ್ಮಿಕ ಆಂದೋಲನವನ್ನು ಉಳಿದ ಕ್ಷೇತ್ರಗಳಲ್ಲಿ ಆದ ಅದರ ಪರಿಣಾಮವನ್ನೂ ಪರಿಶೀಲಿಸಿದಾಗ ಅದನ್ನೊಂದು ವ್ಯಕ್ತಿತ್ವ ನಿರ್ಮಾಣದ ಯುಗವೆಂದೇ ಕರೆಯ ಬೇಕೆನ್ನಿಸುತ್ತದೆ. ಕುಲ-ಶೀಲ-ಆಚಾರಗಳಲ್ಲಿ ವಿಶಾಲ ದೃಷ್ಟಿಯನ್ನೂ ಉದಾರ ಭಾವನೆಯನ್ನೂ ತಂದುಕೊಟ್ಟು ಅಂತರಂಗ ಬಹಿರಂಗ ಶುದ್ಧಿಗಳಿಂದ ಮಹಿಮಾನ್ವಿತರಾಗಿ ಕಲ್ಯಾಣವನ್ನು ಮಾನವ ಕಲ್ಯಾಣ ಕೇಂದ್ರವನ್ನಾಗಿ ಮಾಡಿದ್ದರು ಬಸವಣ್ಣನವರು. ಭಾರತದ ಬೇರೆ ಬೇರೆ ಪ್ರಾಂತಗಳಿಂದಲೂ ಆಕರ್ಷಿತರಾಗಿ ಅನೇಕ ಭಕ್ತರೂ ಶರಣರೂ ಅಲ್ಲಿಗೆ ಧಾವಿಸಿ ಬಂದು, ಕೆಲವರು ಅಲ್ಲಿಯೇ ನೆಲೆನಿಂತು ತಮ್ಮ ಆತ್ಮದ ಹಸಿವನ್ನು ಹಿಂಗಿಸಿಕೊಂಡುದಲ್ಲದೆ ನಾಡಿನ ಜನತೆಯಲ್ಲಿ ತಿಳಿವಿನ ಪ್ರಸಾರಕರಾದರು. ಶಿವಶರಣರ ವ್ಯಕ್ತಿತ್ವ ಹೀಗೆ ತೇಜಃಪುಂಜವಾಗಿದ್ದುದರಿಂದಲೇ ಯುಗ ಯುಗಗಳವರೆಗೂ ಅದು ತನ್ನ ಪ್ರಭಾವವನ್ನು ಬೀರಲು ಸಮರ್ಥವಾಗಿ ಸ್ಫೂರ್ತಿದಾಯಕವಾಗಿದೆ.

ಅವರ ಕಾಲಕ್ಕೆ ತುಸು ಈಚೆಗೆ ಕೆಲವು ಶಿವಶರಣರು ಬಾಳಿದ್ದು, ಬಸವಾದಿ ಪ್ರಮಥರ ಆ ಮಹಾಕಾರ್ಯವನ್ನು ಮುಂದುವರಿಸಿಕೊಂಡು ಹೋಗಿದ್ದಾರೆ. ಆ ಶಕ್ತಿಸಂಚಯದ ವಾಹಕರಾಗಿ ಹೋದ ಹೋದಲ್ಲೆಲ್ಲ ತಮ್ಮ ವ್ಯಕ್ತಿತ್ವದ ಪ್ರಭಾವದಿಂದ ವೀರಶೈವದ ಬೆಳಕನ್ನು ಬೀರಿದ್ದಾರೆ. ತಮ್ಮ ಕಾರ್ಯದಲ್ಲಿ ಇವರು ಗಟ್ಟಿಗರಾಗಿದ್ದು ಪರಮತ ಪ್ರಾಬಲ್ಯದ ಆ ಕಾಲದಲ್ಲಿಯೂ ಅತ್ಯಂತ ನಿಷ್ಠೆಯಿಂದಲೂ, ಗಾಂಭೀರ್ಯದಿಂದಲೂ ತಮ್ಮ ಸಂಘಟನಾ ಕಾರ್ಯವನ್ನು ಕೊನೆಗಾಣಿಸಿದ್ದಾರೆ. ಇವರಲ್ಲಿ ವಚನಕಾರನಾಗಿ ನಮ್ಮ ಮನಸ್ಸನ್ನು ಸೆಳೆದಿರುವ ಆದಯ್ಯನೂ ಒಬ್ಬನು. ಇವನ ವ್ಯಕ್ತಿತ್ವವನ್ನು ಕುರಿತು ನಾಲ್ಕು ಮಾತುಗಳನ್ನು ಈ ಲೇಖನ ಒಳಗೊಂಡಿದೆ.

೨

ವೀರಶೈವ ಕವಿಗಳನೇಕರು ಶಿವಶರಣರನ್ನು ನೆನೆಯುವಾಗಲೆಲ್ಲ ಆದಯ್ಯನಿಗೂ ಆದರದ ಮನ್ನಣೆಯಿತ್ತಿದ್ದಾರೆ. ಶಿವಕವೀಂದ್ರನಾದ ಹಂಪೆಯ ಹರೀಶ್ವರನು ಆದ್ಯಯ್ಯನ ರಗಳೆಯನ್ನು ರಚಿಸಿ, ಅವನ ಉತ್ಕಟ ನಿಷ್ಠೆಯನ್ನೂ ಕಲಿತನದ ಮಹಿಮೆಯನ್ನೂ ಕೊಂಡಾಡಿದ್ದಾನೆ. ಹರಿಹರನ ಶಿಷ್ಯನೂ, ಷಟ್ಪದಿ ಸಂಪ್ರದಾಯ ಸ್ಥಾಪಕನೂ ಆದ ರಾಘವಾಂಕ ಕವಿಯ ಸೋಮನಾಥ ಚರಿತೆ ಆದಯ್ಯನ ಚರಿತೆಯೇ ಆಗಿದೆ. ಇವೆರಡು ಕಾವ್ಯಗಳಿಂದಲೂ ಹಾಗೂ ಇತರ ಗ್ರಂಥಗಳಿಂದಲೂ ಆದಯ್ಯನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಹೀಗೆ ಸಂಗ್ರಹಿಸಬಹುದಾಗಿದೆ.

ಸೌರಾಷ್ಟ್ರಪುರದೊಳಗೆ ದೋರದತ್ತನೆಂಬ ಶ್ರೀಮಂತ ಸೆಟ್ಟಿ, ಆತನಂಗನೆ ಪುಣ್ಯವತಿ. ಇವರಿಗೆ ಆದಯ್ಯ ಮಗನಾಗಿ ಜನಿಸಿದನು. ದೋರದತ್ತ ತನ್ನ ಭಕ್ತಿಗೆ ಕೂಲಿ ಬೇಡುವಂಥ ಭಕ್ತನಾಗಿರಲಿಲ್ಲ. ದಂಪತಿಗಳಿಬ್ಬರೂ ಪ್ರಾಣಲಿಂಗದಂತಿರುವ ಸೋಮನಾಥನಲ್ಲಿ ನಿಸ್ಸೀಮ ನಿಷ್ಠೆಯುಳ್ಳವರಾಗಿದ್ದರು. ಆಚಾರದಲ್ಲಿ ಬ್ರಹ್ಮನಂತೆ, ಚಾರಿತ್ರ್ಯದಲ್ಲಿ ಗಂಗೆಯಂತೆ, ಸತ್ಕಲಾಪ್ರೌಢಿಮೆಯಲ್ಲಿ ಭಾರತಿಯಂತೆ ಇದ್ದ ತಂದೆ, ಪುರುಷ ಭಕ್ತಿಯಲ್ಲಿ, ಯುಕ್ತಿಯಲ್ಲಿ, ನೀತಿಯಲ್ಲಿ, ಸೌಭಾಗ್ಯದಲ್ಲಿ, ಶಂಕರಾರ್ಚನೆಯಲ್ಲಿ ವಿಮಲ ವಿಖ್ಯಾತೆಯಾದ ತಾಯಿ, ಇಂಥ ವಾತಾವರಣದಲ್ಲಿ ಮಗುವಿನ ಬಾಲ್ಯ ಕಳೆಯಿತು. ವಿದ್ಯಾಭ್ಯಾಸದಲ್ಲಿ ಪರಿಣತನಾಗಿ ಒಳ್ಳೆಯ ಪಾಂಡಿತ್ಯವನ್ನು ಆದಯ್ಯ ಪಡೆದುಕೊಂಡನು. ಅಲ್ಲದೆ ದೋರದತ್ತ ಆಣಿಕೇಣಿ, ನೋಟ, ತೂಕ ಮೊದಲಾದ್ದರಲ್ಲಿ ರತ್ನ ಪರೀಕ್ಷೆಗಳಲ್ಲಿ ಆದಯ್ಯನನ್ನು ಪಳಗಿಸಿದ. ತಾರುಣ್ಯ ಪಡೆದ ಆದಯ್ಯನಿಗೆ ಹೇರುಗಳಲ್ಲಿ ಮುತ್ತು ಮಾಣಿಕ್ಯ ತೆಗೆದುಕೊಂಡು ತೆಂಕನಾಡಿನ ಕಡೆಗೆ ಹೋಗಿ ಗಳಿಕೆ ಮಾಡಬೇಕೆಂದೆನಿಸಿ ತಂದೆಯಲ್ಲಿ ಬಿನ್ನೈಸಿಕೊಂಡನು. ದೋರದತ್ತ ಅವನಿಗೆ ಬೇಕಾದ ಎಲ್ಲ ಅನುಕೂಲಗಳನ್ನು ಒದಗಿಸಿಕೊಟ್ಟು ಚಿತ್ತದಲ್ಲಿ ಸೋಮಯ್ಯನನ್ನು ಎಡೆವಿಡಿದಿರಬೇಕೆಂದು ಉಪದೇಶಿಸಿ ಹುಲಿಗೆರೆ ಅಣ್ಣಿಗೆರೆಗಳತ್ತ ಹೋಗಿ ವ್ಯವಹಾರದಲ್ಲಿ ತೊಡಗಲು ಅನುವು ಮಾಡಿಕೊಟ್ಟನು.

ಆದಯ್ಯನು ಹಾದಿಯಲ್ಲಿ ಬರುವ ಊರು, ನಗರ, ಪಟ್ಟಣ, ಅಗ್ರಹಾರಗಳಲ್ಲಿ ವ್ಯವಹಾರ ಮಾಡುತ್ತಾ ಚಂದ್ರಾದಿತ್ಯ ಚಕ್ರೇಶನಿರುವ ಹುಲಿಗೆರೆಗೆ, ಈಗಿನ ಲಕ್ಷ್ಮೇಶ್ವರಕ್ಕೆ ಬಂದನು. ಆಗ ಜೈನ ಸಂಸ್ಕೃತಿಯ ಕೇಂದ್ರವಾಗಿದ್ದ ಹುಲಿಗೆರೆಯಲ್ಲಿ ಶಿವಭಕ್ತರ ಮನೆಗಳೇ ಆದಯ್ಯನ ಕಣ್ಣಿಗೆ ಬೀಳಲಿಲ್ಲ. ಕೊನೆಗೆ ಹೋಜೇಶ್ವರ ಶಿವಾಲಯದಲ್ಲಿ ಆಶ್ರಯ ಪಡೆದು ನಿಂತನು. ಒಮ್ಮೆ ಆ ಊರಲ್ಲಿ ಅಡ್ಡಾಡುತ್ತ ಬರುತ್ತಿರುವಾಗ ಸುರಹೊನ್ನೆ ಬಸದಿಯ ಪೂಜಾರಿ ಪಾರಿಶ ಪಂಡಿತನ ಮಗಳಾದ ಪದ್ಮಾವತಿ ಕಾಮನ ಕೈಯ ಸರಳಿನಂತೆ ಗೋಚರಿಸಿದಳು. ಇಬ್ಬರಲ್ಲಿಯೂ ಅನುರಾಗವುಂಟಾಯಿತು. ಹೋಜೇಶ್ವರ ಶಿವಾಲಯದ ಹಿರಿಯ ಆಚಾರ್ಯರಿಂದ ಪದ್ಮಾವತಿಗೆ ಶಿವದೀಕ್ಷೆಯನ್ನು ಕೊಡಿಸಿ ಆದಯ್ಯನು ಅವಳನ್ನು ಲಗ್ನವಾದನು. ಅವರು ಸುಖವಾಗಿದ್ದರೆ ಸಾಕೆಂದು ಪದ್ಮಾವತಿಯ ತಂದೆ-ತಾಯಿಗಳೂ ಅದಕ್ಕೆ ಸಮ್ಮತಿಸಿದರು.

ಕೆಲ ದಿನಗಳಾದ ಮೇಲೆ ಅತಿಥಿಗಳಾಗಿ ಬಂದ ಐವರು ಶಿವಭಕ್ತರನ್ನು ತೃಪ್ತಿಪಡಿಸಲು ಆದಯ್ಯನ ಆಜ್ಞೆಯಂತೆ ಪದ್ಮಾವತಿಯು ಭೋಜನಕ್ಕೆ ಸಿದ್ಧಪಡಿಸಿದಳು. ಇತ್ತ ಪಾರಿಶ ಪಂಡಿತನ ಮನೆಗೆ ಕೋಪಣ ನಗರದ ಕಡೆಯ ಹಲವರು ಸವಣರು ಉಂಬಹೊತ್ತಿಗೆ ಬರಲು ಅವರಲ್ಲಿ ಅಡಿಗೆ ಕಡಿಮೆ ಬೀಳುವುದು. ತಂದೆ-ತಾಯಿಗಳಿಬ್ಬರೂ ಪದ್ಮಾವತಿಯಲ್ಲಿಗೆ ಹೋಗಿ ಶಿವಭಕ್ತರಿಗಾಗಿ ಮಾಡಿಟ್ಟ ಸಮಸ್ತ

ಭೋಜನವನ್ನು ಬಲಾತ್ಕಾರದಿಂದ ತೆಗೆದುಕೊಂಡೊಯ್ದರು. ಮನೆಗೆ ತಪಸ್ವಿಗಳನ್ನು ಕರೆದುತಂದ ಆದಯ್ಯನಿಗೆ ನಡೆದ ಸಂಗತಿಯೆಲ್ಲ ತಿಳಿದು ಬೆದಬೆದನೆ ಬೆಂದು ಅತಿಥಿಗಳಿಗೆ ಹಣ್ಣು ಹಂಪಲನ್ನೂ ಹಾಲನ್ನೂ ಉಣಬಡಿಸಿ ತಾಂಬೂಲವನ್ನಿತ್ತು ಕಳುಹಿಸಿಕೊಟ್ಟನು.

ಸಂತಾಪಗೊಂಡು ಉಪವಾಸ ಮಲಗಿದ ಆದಯ್ಯನನ್ನು ಪಾರಿಶ ಸೆಟ್ಟಿ ಊಟಕ್ಕೆಬ್ಬಿಸಲು ಮಾತಿಗೆ ಮಾತು ಬೆಳೆದು ಆದಯ್ಯನು ಒಂದು ತಿಂಗಳಲ್ಲಿ ಸೌರಾಷ್ಟ್ರ ಸೋಮೇಶ್ವರನನ್ನು ತಂದು ಹುಲಿಗೆರೆಯ ಸುರಹೊನ್ನೆ ಬಸದಿಯಲ್ಲಿ ನಿಲ್ಲಿಸಿದ ತರುವಾಯವೇ ಊಟ ಮಾಡುವೆನೆಂದು ಪ್ರತಿಜ್ಞೆಗೈದು ಪ್ರತಿಜ್ಞಾಪೂರ್ತಿಗಾಗಿ ಆದಯ್ಯನು ಸೌರಾಷ್ಟ್ರಕ್ಕೆ ಹೊರವಂಟನು.

ನಾನಾ ನಿರೋಧದಿಂದ ಬರಿದೆ ಕೆಡುವ ಒಡಲನ್ನು ಈಶನಿಗೆ ಬಿಟ್ಟೊಡೆ ಅದೇ ಬದುಕು ಎಂದು ನಂಬಿದ ಆದಯ್ಯನಿಗೆ ಎಷ್ಟು ತೊಡರುಗಳು ಬಂದೆರಗಿದರೂ, ಜಗ್ಗದೆ ಒಡಲನ್ನು ಉತ್ತಮ ಸಮಯಕ್ಕಿಕ್ಕುವದೆ ಗೆಲವೆಂದು ಸೋಮಯ್ಯ ನನ್ನೊಲಿಸಿಕೊಂಡು, ಹೇಳಿದ ಅವಧಿಯಲ್ಲಿ, ಸುರಹೊನ್ನೆ ಬಸದಿಯಲ್ಲಿ ನಂದಿ ವಾಹನಲೀಲೆಯಲ್ಲಿ ಶೋಭಿಸುವ ಸೋಮೇಶ್ವರನನ್ನು ಸ್ಥಾಪಿಸುವನು. ಹರನ ಭವನವನ್ನು ಸುತ್ತಿ ಮುತ್ತಿದ ಹಗೆಗಳನ್ನು ಸೋಲಿಸಿ ಶರಣಾಗತರನ್ನು ಕಾಯ್ದು ಹೋರಾಡಿದ ಆದಯ್ಯನ ಶಿವಭಕ್ತಿಗೆ ಜಯವಾಯಿತು. ಮುಂದೆ ಆದಯ್ಯನು ತನ್ನ ಸತಿ ಪದ್ಮಾವತಿಯೊಡನೆ ಸೋಮನಾಥನ ಬಲದ ಕಂಬದೊಳಗೆ ಐಕ್ಯವನ್ನು ಪಡೆದನು.

ಲಕ್ಷ್ಮೇಶ್ವರದ ಸೋಮನಾಥ ದೇವಾಲಯದೊಳಗೆ ರಂಗಮಂಟಪದ ಬಲಕ್ಕಿರುವ ಒಂದು ಶಿವಲಿಂಗಕ್ಕೆ 'ಆದಯ್ಯನ ಗದ್ದುಗೆ' ಎಂದು ಈಗಲೂ ಹೇಳುತ್ತಾರೆಂಬ ಸಂಗತಿಯನ್ನು ಶ್ರೀ ವೀ.ರು. ಕೊಪ್ಪಳ ಅವರು 'ಆದಯ್ಯನ ವಚನಗಳು' ಪ್ರಸ್ತಾವನೆಯಲ್ಲಿ ಸೂಚಿಸಿದ್ದಾರೆ. ಅನುಭವ ಮಂಟಪದ ಶಿವಶರಣರಲ್ಲಿ ಆದಯ್ಯನ ಹೆಸರು ಬರುವುದಿಲ್ಲವಾದುದರಿಂದಲೂ, ಆದಯ್ಯನು ಹುಲಿಗೆರೆಯ ಸಮೀಪದ ಅಬ್ಬಲೂರಿನ ಏಕಾಂತದ ರಾಮಯ್ಯನಂತೆ ವೀರಶೈವದ ಉದ್ಧಾರ, ಪ್ರಸಾರಗಳಿಗಾಗಿ ತನ್ನ ಜೀವನವನ್ನೇ ಪಣವಾಗಿರಿಸಿರಬೇಕೆಂದೂ, ಆದುದರಿಂದ ಅವನು ಅಭ್ಯುದಯಕ್ಕೆ ಬಂದುದು ಶಿವಶರಣರು ಕಣ್ಮರೆಯಾದ ೪೦-೫೦ ವರ್ಷಗಳ ನಂತರವೆಂದೂ, ಪುರಾತನ ವಚನಗ್ರಂಥವಾದ ೩೦೦೦ ವಚನಗಳ ಕಟ್ಟಿನಲ್ಲಿ ಆದಯ್ಯನ ವಚನಗಳು ಕೊನೆಯದಾಗಿ ಬರುವುದರಿಂದ ಅವನು ತನ್ನ ವಚನಗಳನ್ನು ಶಿವಶರಣರ ಕಾಲದ ತರುವಾಯ ಬರೆದಿರಬೇಕೆಂದೂ ಅದೇ ಪ್ರಸ್ತಾವನೆಯಲ್ಲಿ ಶ್ರೀಯುತರು ಊಹಿಸಿರುವುದು ಸಮಂಜಸವೆನಿಸುತ್ತದೆ. ಆದರೆ ಆದಯ್ಯನು ಸೌರಾಷ್ಟ್ರದಿಂದಲೇ ಬಂದವನಾಗಿರಲಾರ ಎಂಬ ಅವರ ಅಭಿಪ್ರಾಯಕ್ಕೆ ಸಾಕಷ್ಟು ಆಧಾರಗಳಿಲ್ಲವೆಂದು ಹೇಳಬಹುದು.

ವಚನಕಾರರ ವ್ಯಕ್ತಿತ್ವದ ವಿಕಾಸವನ್ನು ಅರಿಯಬೇಕಾದರೆ ಅವರ ಅಂತರಂಗದ ರತ್ನಗಳಂತಿರುವ ವಚನಗಳನ್ನೇ ಅಭ್ಯಸಿಸಬೇಕು. ಅವರ ಆಧ್ಯಾತ್ಮಿಕ ಸಾಧನೆಯ ಸಾರಸರ್ವಸ್ವವೂ ಅಲ್ಲಿ ನಮಗೆ ದೊರೆಕೊಳ್ಳುತ್ತದೆ. ಅವರ ವ್ಯಕ್ತಿತ್ವಕ್ಕೆ ಅವು ಮಣಿ ಮುಕುರದಂತಿವೆಯೆಂದು ಹೇಳಬಹುದು. "ಸೌರಾಷ್ಟ್ರ ಸೋಮೇಶ್ವರ" ಎಂಬ ಅಂಕಿತದಲ್ಲಿ ಬರೆದ ಆದಯ್ಯನ ಸುಮಾರು ನಾಲ್ಕುನೂರು ವಚನಗಳನ್ನು ಈಚೆಗೆ ಶ್ರೀ ಉತ್ತಂಗಿ ಚನ್ನಪ್ಪನವರು ಸಂಶೋಧಿಸಿ, ಸಂಗ್ರಹಿಸಿ ಪರಿಷ್ಕರಿಸಿದ್ದಾರೆ. ಹಿಂದಿನ ವಚನ ಸಂಕಲನಕಾರರು ತಮ್ಮ ಸಂಕಲನಗಳಲ್ಲಿ ಆದಯ್ಯನ ವಚನಗಳನ್ನು ಸೇರಿಸಿರುವುದು ಅವುಗಳ ಮಹತ್ವವನ್ನು ಸಾರಿಹೇಳುತ್ತದೆ.

ಆದಯ್ಯನ ನಿಷ್ಠೆಯ ಹೋರಾಟ ಅವನ ಆಧ್ಯಾತ್ಮಿಕ ಜೀವನದ ಅಡಿಗಲ್ಲಾಗಿದೆ. ಅವನ ವಚನಗಳಲ್ಲಿ ಸ್ಪಷ್ಟವಾದ ವಿಚಾರ ಸರಣಿಯನ್ನು ನಾವು ಕಾಣುತ್ತೇವೆ. ತನ್ನ ವಾದವನ್ನು ಆಧಾರಪೂರ್ವಕವಾಗಿ, ಪಾಂಡಿತ್ಯಪೂರ್ಣವಾಗಿ ಅವನು ಮಂಡಿಸುತ್ತಾನೆ. ಕೊರೆದಿಟ್ಟ ಹಾಗೆ ಹೇಳುವುದು ಅವನ ಸ್ವಭಾವವಾಗಿದೆ. ಅವನ ಅನುಭವದ ಆಳವನ್ನೂ, ಜ್ಞಾನಶಕ್ತಿಯನ್ನೂ, ಅವನ ವ್ಯಕ್ತಿತ್ವದ ಘನತೆಯನ್ನೂ ತಿಳಿದುಕೊಳ್ಳಲು ಕೆಲವು ವಚನಗಳನ್ನಿಲ್ಲಿ ಪರಿಶೀಲಿಸಬಹುದು.

**'ಅಗಣಿತನದ್ವಯನನುಪಮನಪ್ಪ ಅಭವಂಗೆ**
**ಭವರಹಿತನಾಗಿ ಭಕ್ತಿಯ ಮಾಡಬೇಕಲ್ಲದೆ**

ತಾನು ಭವದೊಳಿರ್ದು ಬಂಧನಕ್ಕೊಳಗಾಗಿ, ಮರ್ತ್ಯರಿಗೆ ತೊತ್ತಾಗಿ ಮಾಯಾಪಾಶದ ಕಾಲು ಕಣ್ಣಿಯೊಳು ಸಿಲ್ಕಿ,

**ಕಾಮಂಗೆ ಗುರಿಯಾಗಿ, ಕಾಲಂಗೆ ಕೈವಶವಾಗಿ**
**ಮಾಡುವ ಭಕ್ತಿಗೆ ಇವರು ನಾಚರು ನೋಡಾ !**
**ಮರ್ಮವರಿತು ಮಾಡದ ಭಕ್ತಿ ಸೊಣಗನ ಹಿಂದೆ**
**ಸೊಣಗ ಹರಿದಂತಾಯಿತ್ತಯ್ಯ ಸೌರಾಷ್ಟ್ರ ಸೋಮೇಶ್ವರಾ!'**

ಮಾಯೆ, ಕಾಮ, ಕಾಲ–ಇವರಿಗೆ ಕೈವಶವಾಗದೆ ಮಾಡುವ ಭಕ್ತಿಯೇ ಭವಬಂಧನವನ್ನು ಮುರಿದ ಭಕ್ತಿ 'ಮರ್ಮವರಿತು ಮಾಡದ ಭಕ್ತಿ ಸೊಣಗನ ಹಿಂದೆ ಸೊಣಗ ಹರಿದಂತೆ' ಎಂಬ ದಿಟ್ಟತನದ ಉಪಮೆಯಿಂದ ಆದಯ್ಯ ಆ ಮಾತನ್ನು ಅಚ್ಚೊತ್ತಿದಂತೆ ಹೇಳಿದ್ದಾನೆ. ಆದಯ್ಯನೂ ಮಾಯೆಯನ್ನು ಕುರಿತು ಒಡನುಡಿ ದುದುಂಟು. ಅಕ್ಕಮಹಾದೇವಿಯ ವಚನಗಳ ಜೊತೆಗೆ ಆದಯ್ಯನ ಅದೇ ವಿಚಾರದ

ವಚನಗಳನ್ನು ಹೋಲಿಸಿ ನೋಡುವಹಾಗಿದೆ. ಇವೂ ಅಷ್ಟೇ ಸರಳವಾಗಿ ಪರಿಣಾಮಕಾರಿಯಾಗಿವೆ.

**"ತನು ಮಾಯೆ, ತನುವಿಂಗೆ ಮನ ಮಾಯೆ,**
**ಮನಕ್ಕೆ ನೆನಹು ಮಾಯೆ, ನೆನಹಿಂಗೆ ಅರಿವು ಮಾಯೆ,**
**ಅರಿವಿಂಗೆ ಕುರುಹು ಮಾಯೆ,**
**ಇದನರಿಯದೆ ಹರಿಹರ ಬ್ರಹ್ಮಾದಿಗಳೆಲ್ಲರೂ**
**ಮಾಯೆಯ ಕಾಲ ಸರಮಾಲೆಗಳಾದರು.**
**ನಿನ್ನ ಮಾಯೆ ದೇವದಾನವ ಮಾನವರಿಗೆ ಸರಿದೊಡಕಾಗಿ**
**ಕಾಡಿತ್ತು ಸೌರಾಷ್ಟ್ರ ಸೋಮೇಶ್ವರಾ".**

ತನು, ಮನ ನೆನಹು, ಅರಿವು, ಕುರುಹು–ಇವೆಲ್ಲ ಒಂದಕ್ಕೊಂದು ಹೊಂದಿಕೊಂಡಿರುವ ಮಾಯೆಯನ್ನು ಇಲ್ಲಿ ವಿವರಿಸಿದೆ. ಇದನ್ನರಿಯದೆ ಹರಿಹರಬ್ರಹ್ಮಾದಿಗಳೂ 'ಮಾಯೆಯ ಕಾಲ ಸರಮಾಲೆಗಳಾದರು' ಎಂಬ ಉಕ್ತಿ ಅದರ ಪ್ರಚಂಡತೆಯನ್ನು ಪರಿಣಾಮಕಾರಿಯಾಗಿ ಮೂಡಿಸುತ್ತದೆ. ಕಾಮಧೇನು ಕಲ್ಪವೃಕ್ಷಗಳಂತಹವೂ ಬಯಸಿದಲ್ಲದೆ ಏನನ್ನೂ ಕೊಡಲರಿಯವು. ಆದರೆ ಸೋಮೇಶ್ವರ ಲಿಂಗ ಕೊಡುವ ಬಗೆಯನ್ನು ಆದಯ್ಯ ದೃಷ್ಟಾಂತಗಳಿಂದ ಸುಂದರವಾಗಿ ನಿರೂಪಿಸಿದ್ದಾನೆ:

**"ಕಾಮಧೇನು ಕಾಮಿಸಿದಲ್ಲದೆ ಈಯಲರಿಯದು,**
**ಕಲ್ಪವೃಕ್ಷ ಕಲ್ಪಿಸಿದಲ್ಲದೆ ಈಯಲರಿಯದು,**
**ಚಿಂತಾಮಣಿ ಚಿಂತಿಸಿದಲ್ಲದೆ ಈಯಲರಿಯದು,**
**ನವನಿಧಿ ಬಯಸಿದಲ್ಲದೆ ಈಯಲರಿಯದು**
**ತವನಿಧಿ ತೆಗೆದಲ್ಲದೆ ಕೊಡಲರಿಯದು,**
**ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಬಯಸದೆ ಎನ್ನನೀವುದಕ್ಕೆ ಮುನ್ನವೆ**
**ತನ್ನನಿತ್ತ ಸೌರಾಷ್ಟ್ರ ಸೋಮೇಶ್ವರ ಲಿಂಗವ ಕಂಡೆ".**

ಗಹನವಾದ ತಾತ್ವಿಕ ವಿಷಯಗಳನ್ನು ತಿಳಿಯಾಗಿ ತಿಳಿಸಬಲ್ಲ ಜಾಣ್ಮೆ ಆದಯ್ಯನ ವಚನಗಳ ಒಂದು ಮುಖ್ಯ ಗುಣವೆಂದು ಹೇಳಬಹುದು. ಸುಖಿ, ದುಃಖಿ, ಜ್ಞಾನಿ, ಮುಕ್ತ –ಇವರ ಬಗ್ಗೆ ಸ್ವಲ್ಪದರಲ್ಲಿ ಸುಸೂತ್ರವಾಗಿ ಮನಸ್ಸಿಗೆ ಮುಟ್ಟುವಂತೆ ಹೇಳುತ್ತಾನೆ:

**"ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತ ಸುಖಿ**
**ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳು ಮನಗಂಡು ಸುಳಿದಾತ ದುಃಖಿ**

**ಮನಸ್ಸು ಬಹಿರ್ಮುಖವಾಗಲು ಮಾಯಾ ಪ್ರಪಂಚ,**
**ಮನವಂತರ್ಮುಖವಾದರೆ ಅವಿರಳ ಜ್ಞಾನಿ**
**ಮನವ ಮಹದಲ್ಲಿ ನಿಂದಿರಲಾತನು ಮುಕ್ತನು**
**ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಭೇದ್ಯನು".**

ಈ ವಚನದಲ್ಲಿ ಉಪಮೆ, ರೂಪಕಗಳಾವವೂ ಇರದಿದರೂ ಇಲ್ಲಿಯ ಮಾತಿನ ಲಯ ಮನಸ್ಸನ್ನು ಸಾಲಿನಿಂದ ಸಾಲಿಗೆ ತೂಗಿಸಿಕೊಂಡೊಯ್ದು ಅಭೇದ್ಯವಾಗಿ ನಿಲ್ಲುತ್ತದೆ.

ದೃಷ್ಟಾಂತಗಳನ್ನು ಕೊಟ್ಟು, ಆಲೋಚನೆಗಳನ್ನು ತೊಡಕಾಗದಂತೆ ಬಿಡಿಸಿಟ್ಟು ಹೌದೆನ್ನುವಂತೆ ಹೇಳುತ್ತಾನೆ ಆದಯ್ಯ.

**"ಘಟವ ಮಾಡಿದ ಕುಲಾಲನಾಘಟದೊಳಿಪ್ಪುದಿಲ್ಲವೆಂತಂತೆ**
**ಬೆಳೆಸ ಬಿತ್ತಿದವನಾ ಬೆಳೆಯೊಳಿಪ್ಪುದಿಲ್ಲವೆಂತಂತೆ**
**ರಥವ ಮಾಡಿದ ರಥಿಕ ತಾ ರಥದೊಳಿಪ್ಪುದಿಲ್ಲವೆಂತಂತೆ**
**ಸರ್ವನಾಡಿಸುವ ಶರ್ವನು ಯಂತ್ರ ಯಂತ್ರಿಯಂತಿರ್ಪನಾಗಿ**
**ಸರ್ವವೂ ಶಿವನೆಂಬ ಅಜ್ಞಾನಿಗಳ ಮೆಚ್ಚುವನೇ**
**ನಮ್ಮ ಸೌರಾಷ್ಟ್ರ ಸೋಮೇಶ್ವರನು".**

ಆದಯ್ಯ ಕಂಡಿರುವ 'ಚೈತನ್ಯ ಜಂಗಮ'ದ ಚಿತ್ರ ಭವ್ಯವಾದ ಕಲ್ಪಕತೆಯಿಂದ ಕೂಡಿದೆ. ಮೇಲೆ ನೋಡಲು ಇದೊಂದು ರೂಪಕಗಳ ಪಟ್ಟಿಯಂತೆ ಕಂಡು ಬಂದರೂ ಮನಸ್ಸಿನಲ್ಲಿ ಭಾವಿಸುತ್ತ ಹೋದಂತೆ ಪೂರ್ಣ ಪ್ರತಿಮೆಯೊಂದು ನಮ್ಮ ಕಣ್ಣೆದುರು ನಿಲ್ಲುತ್ತದೆ:

**"ಪಾತಾಳದಿಂ ಕೆಳಗೆ ಪಾದ, ಸುವರ್ಲೋಕದಿಂ ಮೇಲೆ ಉತ್ತಮಾಂಗ;**
**ಬ್ರಹ್ಮಾಂಡವೇ ಮಕುಟ, ಗಗನವೇ ಮುಖ;**
**ಚಂದ್ರಾರ್ಕಾಗ್ನಿಗಳೇ ನೇತ್ರ, ದಶದಿಕ್ಕುಗಳೇ ಬಾಹುಗಳು;**
**ಮಹದಾಕಾಶವೇ ಶರೀರ, ತನುಗಳೇ ತನೂರುಹ;**
**ಶೂನ್ಯವೇ ಕರಸ್ಥಲದ ಲಿಂಗ, ನಕ್ಷತ್ರವೇ ಪುಷ್ಪ;**
**ನಿತ್ಯವೇ ಪೂಜೆ, ಮೇಘವೇ ಜಡೆ;**
**ಬೆಳದಿಂಗಳೇ ವಿಭೂತಿ, ಪರ್ವತಂಗಳೇ ರುದ್ರಾಕ್ಷಿಗಳು;**
**ಪಂಚಬ್ರಹ್ಮವೇ ಪಂಚಾಕ್ಷರ, ತತ್ವಂಗಳೇ ಜಪಮಾಲೆ;**

ಮೇರುವೇ ದಂಡಕೋಲು, ಸಮುದ್ರವೇ ಕಮಂಡಲ;
ಋತುಗಳಾರು ಷಟ್‌ಸ್ಥಲ, ಶೇಷನೇ ಕಟಿಸೂತ್ರ;
ಜಗವೇ ಕಂಥೆ, ಅನಂತನೇ ಕೌಪೀನ;
ತ್ರಿಗುಣ ಒಂದಾದುದೇ ಖರ್ಪರ, ಚತುರ್ವೇದವೇ ಗಮನ;
ಮಿಂಚೇ ಅಂಗರುಚಿ, ಸಿಡಿಲೇ ಧ್ವನಿ;
ವೇದಾಗಮವೇ ವಾಕ್ಯ, ಜ್ಞಾನಮುದ್ರೆಯೇ ಉಪದೇಶ;
ಪೃಥ್ವಿಯೇ ಸಿಂಹಾಸನ, ದಿವಾರಾತ್ರಿಯೇ ಅರಮನೆ;
ಶಿವಜ್ಞಾನವೇ ಐಶ್ವರ್ಯ, ನಿರಾಳವೇ ತೃಪ್ತಿ;
ಇಂತಪ್ಪ ಚೈತನ್ಯ ಜಂಗಮಕ್ಕೆ ಆನು ನಮೋನ್ನಮಃ
ಎನುತಿರ್ದೆನಯ್ಯ ಸೌರಾಷ್ಟ್ರ ಸೋಮೇಶ್ವರಾ".

–ಇಂತಪ್ಪ ಚೈತನ್ಯ ಜಂಗಮಕ್ಕೆ ಯಾರಾದರೂ 'ನಮೋನ್ನಮಃ' ಎಂದಾರು. "ಪೂಜಿಸುವವರ ಕಂಡು ಪೂಜೆಗೈವರಲ್ಲದೆ ಪೂಜೆರಹಿತನಾದ ಪೂಜ್ಯನನಾರೂ ಪೂಜಿಸುವರಿಲ್ಲ ನೋಡಯ್ಯ" ಎನ್ನುವಲ್ಲಿ ಇಂತಪ್ಪ ಚೈತನ್ಯ ಜಂಗಮನನ್ನೇ ಆದಯ್ಯ ಮನಸ್ಸಿನಲ್ಲಿಟ್ಟುಕೊಂಡಿರಬೇಕು.

ಹಿಂದಿನ ಶರಣರ ನಡೆ ನುಡಿಗಳ ಆದರ್ಶದಿಂದ ಆದಯ್ಯನ ವ್ಯಕ್ತಿತ್ವಕ್ಕೆ ಬಣ್ಣ ಬಂದಿದೆ. ಈ ಎಲ್ಲ ಶರಣರ ಗುಣದಲ್ಲಿ ಆದಯ್ಯ ಎಷ್ಟೊಂದು ತಾದಾತ್ಮ್ಯ ಭಾವವುಳ್ಳವನಾಗಿದ್ದನೆಂಬುದಕ್ಕೆ ಈ ವಚನವೇ ಸಾಕ್ಷಿಯಾಗಿದೆ:

"ಬಸವಣ್ಣನೆನ್ನ ಅಂಗ, ಮಡಿವಾಳನೆನ್ನ ಮನ,
ಪ್ರಭುವೆನ್ನ ಪ್ರಾಣ, ಚೆನ್ನಬಸವಣ್ಣನೆನ್ನ ಕರಸ್ಥಲದ ಲಿಂಗ,
ಘಟ್ಟಿವಾಳನೆನ್ನ ಭಾವ, ಸೊಡ್ಡಳ ಬಾಚರಸರೆನ್ನ ಅರಿವು,
ಮಹಾದೇವಿಯಕ್ಕನೆನ್ನ ಜ್ಞಾನ, ಮುಕ್ತಾಯಕ್ಕನೆನ್ನ ಅಕ್ಕರು,
ಸತ್ಯಕ್ಕನೆನ್ನ ಯುಕ್ತಿ, ನಿಂಬಿಯಕ್ಕನೆನ್ನ ನಿಶ್ಚಯ,
ಅಲ್ಲಾಳಿಯಕ್ಕನೆನ್ನ ಸಮತೆ, ಅನಿಮಿಷನೆನ್ನ ನಿಶ್ಚಲ,
ನಿಜಗುಣನೆನ್ನ ಕ್ಷಮೆ, ರೇವಣಸಿದ್ಧದೇವರೆನ್ನ ಪುಣ್ಯನೇತ್ರ
ಸಿದ್ಧರಾಮ ತಂದೆಗಳೆನ್ನ ನೇತ್ರದ ದೃಕ್ಕು,
ಪಂಡಿತಾರಾಧ್ಯರೆನ್ನ ಜಿಹ್ವೆ,
ಮರುಳಸಿದ್ಧದೇವರೆನ್ನ ಶ್ರೋತ್ರ, ಏಕೋರಾಮಯ್ಯಗಳೆನ್ನ ನಾಸಿಕ,

**ಅಸಂಖ್ಯಾತರೆನ್ನ ಅವಯವಗಳು, ಪುರಾತರೆನ್ನ ಪುಣ್ಯದ ಪುಂಜ,**
**ಏಳುನೂರೆಪ್ಪತ್ತು ಅಮರಗಣಂಗಳೆನ್ನ ಗತಿ, ಮತಿ, ಚೈತನ್ಯ**
**ಸೌರಾಷ್ಟ್ರ ಸೋಮೇಶ್ವರಾ,**
**ಆನು ಆ ನಿಮ್ಮ ಶರಣರ ಪಡಿದೊತ್ತಯ್ಯಾ, ನಿಮ್ಮ ಧರ್ಮ, ನಿಮ್ಮ ಧರ್ಮ".**

ಇಚ್ಛಾ, ಜ್ಞಾನ, ಕ್ರಿಯೆಗಳನ್ನು ಸಮನ್ವಯಗೊಳಿಸಿ ಒರೆ ಪರಾಪರದ ಬಣ್ಣಕ್ಕೆ ತಂದ ಶರಣಸ್ಥಲದ ಚೊಕ್ಕತನವನ್ನು ಬಂಗಾರವನ್ನು ಸರಿಯಾಗಿ ತೂಗಿ ಒರೆಗೆಹಚ್ಚಿ ನೋಡಿ ನಿರ್ಣಯಿಸುವ ಒಂದು ಸುಂದರವಾದ ಪೂರ್ಣ ರೂಪಕದಲ್ಲಿ ನಿರೂಪಿಸಲಾಗಿದೆ:

**"ಬ್ರಹ್ಮನೆ ಬಟ್ಟಲು, ವಿಷ್ಣುವೇ ನೇಣು, ರುದ್ರನೇ ತೊಲೆ,**
**ಈ ಮೂವರು ಕೂಡಿದ ತ್ರಾಸಿನಲ್ಲಿ ಬ್ರಹ್ಮಾಂಡವೆಂಬ ಗಟಿಕೆಯ**
**ಪಿಂಡವೆಂಬ ಕಟ್ಟಳೆಯನಿಕ್ಕಿ ತೂಗುವೆನಯ್ಯ!**
**ಇಚ್ಛಾ, ಜ್ಞಾನ, ಕ್ರಿಯಂಗಳೆಂಬ ಶಕ್ತಿತ್ರಯದ**
**ಮುಳ್ಳು ಸರಿಸವಾಗಿ ತೂಗುವೆನಯ್ಯ!**
**ಚಂದ್ರ ಸೂರ್ಯರೊಂದಾದ ಮಚ್ಚವನೊರೆದು ಪರಾಪರದ ಬಣ್ಣಕ್ಕೆ**
**ಪ್ರತಿಯಿಲ್ಲದ ಪ್ರತಿಯಾಗಿ ನಿಂದಿತ್ತು**
**ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರಲ್ಲಿ".**

ಲಿಂಗಸಂಗಿಯಾದ ಮೇಲೆ ಅನ್ಯಸಂಗವನ್ನು ತ್ಯಜಿಸಬೇಕು – ಪತಿವ್ರತೆ ಅನ್ಯ ಪುರುಷರ ಸಂಗವನ್ನು ತ್ಯಜಿಸುವಂತೆ. ಪ್ರಾಣಲಿಂಗವಿದ್ದ ಮೇಲೆ ಸ್ಥಾವರಲಿಂಗಕ್ಕೆ ಹೋಗಿ ಪೊಡಮಡುವದು ಒಳಿತಲ್ಲ. 'ಒಬ್ಬರ ಕೈವಿಡಿದು ಒಬ್ಬರಿಗೆ ಮಾತುಕೊಟ್ಟು, ಮತ್ತೊಬ್ಬರಿಗೆ ಸನ್ನೆ ಮಾಡುವ ಬೋಸರಗಿತ್ತಿಯಂತೆ' ಅದು ಬರಿ ಹಗರಣದ ಕೆಲಸ.

ಆದಯ್ಯನ ಅನುಭಾವದ ಆಳಕ್ಕೆ ಅವನ ಬೆಡಗಿನ ವಚನಗಳು ನಿದರ್ಶನಗಳಾಗಿವೆ. ಭಾವದ ಮರೆಯ ಅನುಭಾವವನ್ನು ಪ್ರಕಟಪಡಿಸುವಾಗ ಅದು ಬೆಡಗಿನ ರೂಪದಲ್ಲಿ, ಸಂಕೇತಮಯವಾಗಿ, ಒಡಪಿನ ಅಂದವನ್ನು ಪಡೆದು ಅಭಿವ್ಯಕ್ತಿಗೊಳ್ಳುವದುಂಟು. ವಚನಕಾರರಲ್ಲಿ ಇದೂ ಒಂದು ಸಂಪ್ರದಾಯವಾಗಿದೆ. ಈ ವಚನಗಳಲ್ಲಿ ಉಪಯೋಗಿಸುವ ಪದಗಳಿಗೆ ವಿಶಿಷ್ಟವಾದ ಅರ್ಥವಿರುತ್ತದೆ.

ಸ್ವಲ್ಪ ಕಷ್ಟಪಟ್ಟು ಈ ಸಂಕೇತಗಳನ್ನು ತಿಳಿದುಕೊಂಡರೆ ಆಯಾ ವಚನದ ಅರ್ಥವ್ಯಾಪ್ತಿಯು ವಿಶಾಲಗೊಳ್ಳುವುದಲ್ಲದೆ ಅಂತರಾರ್ಥವೂ ಹೊಳೆಯುವುದು. ಇಲ್ಲೊಂದು ವಚನವನ್ನು ನೋಡಬಹುದು:

**"ಕೊಡಗೂಸಿಗೆ ಕಡುಬೇನೆಯಾದುದ ಕಂಡೆ,**
**ಹಡೆದಿರ್ದ ಶಿಶುವ ಕೊಡಗೂಸು ನುಂಗಿತ್ತ ಕಂಡೆ,**
**ಹಿಡಿದಿರ್ದ ಕೋಳಿ ಒಡನುಂಬುದ ಕಂಡೆ,**
**ಒಡನಿರ್ದ ನೀಲ ಬಿಡು ಮುತ್ತಾದುದ ಕಂಡೆ,**
**ಕೊಡನೊಳಗೊಂದು ಕಡೆ ಇಲ್ಲದ ರತ್ನವ ಕಂಡೆ,**
**ಸೌರಾಷ್ಟ್ರ ಸೋಮೇಶ್ವರನೆಡೆವಿಡದಿಲ್ಲದಿಪ್ಪ ಬೆಡಗ ಕಂಡೆ".**

ಇಲ್ಲಿ ಕೊಡಗೂಸಿಗೆ ಶರಣಸತಿಯೆಂದೂ, ಶಿವತತ್ವದಲ್ಲಿ ಬೆರೆಸಬೇಕೆಂಬ ತೂರ್ಯಾವಸ್ಥೆಗೆ ಕಡುಬೇನೆಯೆಂದೂ, ಇಷ್ಟಲಿಂಗವನ್ನು ಹಡೆದಿರ್ದ ಶಿಶುವಿಗೂ, ಅಂತರಂಗದ ಅಜ್ಞಾನವನ್ನು ಒಡನಿರ್ದ ನೀಲಕ್ಕೂ, ಮುಕ್ತಸ್ವರೂಪವನ್ನು ಬಿಡು ಮುತ್ತಿಗೂ ಸಂಕೇತಿಸಿ ನಿರೂಪಿಸಲಾಗಿದೆ. ಈ ಬಗೆಯ ನಿರೂಪಣೆ ಸಾಧಕನ ಒಂದು ಅವಸ್ಥೆಯಲ್ಲಿ ಅಗತ್ಯವಾಗಿ ತೋರಬಹುದು.

ಇಂತೀ ಬಗೆಯಾಗಿ ಸೌರಾಷ್ಟ್ರದಿಂದ ಪುಲಿಗೆರೆಗೆ ಬಂದು ತನ್ನ ನಿಷ್ಠಾವಂತಿಕೆ ಜೀವನದಿಂದ ವೀರಶೈವದ ಉದ್ಧರಣ, ಪ್ರಸಾರಗಳನ್ನು ಕೈಕೊಂಡು, ಅಸತ್ಯ ಅನ್ಯಾಯಗಳೆದುರು ವೀರ ಸತ್ಯಾಗ್ರಹಿಯಾಗಿ, ಪಾಂಡಿತ್ಯದಿಂದಲೂ ಸ್ವತಂತ್ರವಾದ ಬುದ್ಧಿಶಕ್ತಿಯಿಂದಲೂ, ಆಧ್ಯಾತ್ಮಿಕ ತೇಜಸ್ಸಿನಿಂದಲೂ ಜನಮನವನ್ನು ಸೆಳೆದುಕೊಂಡು ನಿಜದ ನಿಲವನ್ನು ತೋರಿಸಿಕೊಟ್ಟ ಆದಯ್ಯನ ವ್ಯಕ್ತಿತ್ವ ಅಚ್ಚರಿಗೊಳಿಸುವಂತಿದೆ. ಅವನ ಆರಂಭದ ಕಾಮಜೀವನ ಪ್ರೇಮದಲ್ಲಿ ಸಂಸ್ಕಾರ ಪಡೆದು, ಸರಸ ದಾಂಪತ್ಯದ ಸವಿಯನ್ನುಂಡು ಶಿವಭಕ್ತಿಯಲ್ಲಿ ತನ್ನ ಸ್ವರೂಪದರ್ಶನ ಪಡೆದಿದೆ. ನಿಷ್ಠೆ ಹೋರಾಟಗಳಲ್ಲಿ ತನ್ನ ಶಕ್ತಿಯನ್ನು ಪ್ರಕಾಶಗೊಳಿಸಿ ಅಲ್ಲಿಯೇ ನಿಲ್ಲದೆ, ಭಕ್ತಿ-ಜ್ಞಾನ-ಕ್ರಿಯೆಗಳನ್ನು ಸಮನ್ವಯಗೊಳಿಸುವಲ್ಲಿ ಆದಯ್ಯನ ವ್ಯಕ್ತಿತ್ವ ವಿಕಾಸಗೊಂಡಿರುವುದನ್ನು ಅವನ ವಚನಗಳಲ್ಲಿ ಕಾಣುತ್ತೇವೆ. ಶರಣರ ಜೀವನ ಇಂಥ ಒಂದು ಪಕ್ವಾವಸ್ಥೆಯನ್ನು ಪಡೆದಾಗಲೇ ಅಂತರಂಗದ ಅನ್ವೇಷಣೆಗೆ ತೊಡಗಿದಾಗಲೇ ಅವರಿಂದ ವಚನ ರಚನೆ ನಡೆದಿರುವುದು ಗಮನಾರ್ಹವಾಗಿದೆ. 'ನಿಜನಿಂದ ಘನತೇಜ' ಅಲ್ಲಿ ತಾನೇ ತಾನಾಗಿ ಪ್ರಕಾಶಗೊಂಡಿದೆ. ಈ ಸ್ಥಲವನ್ನು ಮುಟ್ಟಿದಾಗಲೇ ಆದಯ್ಯ 'ಹೆಸರಿಡಬಾರದ ಹಿರಿಯ'ನಾಗಿ ಕಂಗೊಳಿಸಿದ್ದಾನೆ.

*(ಸಾಹಿತ್ಯ ಚಿಂತನ : ೧೯೬೬)*



೭



# ಸರ್ವಜ್ಞ : ಹೊಲಬರಿತು ಹೊತ್ತಿಗೊದಗುವ ಮಾತು

'ಸಾಹಿತ್ಯವೆಲ್ಲರಿಗೆ ಇಲ್ಲ' ಎಂದು ಹೇಳಿದ್ದರೂ ಸರ್ವಜ್ಞ ಎಲ್ಲರಿಗೂ ನಿಲುಕಬಹುದಾದ ಮಾತುಗಳಲ್ಲಿ ತನ್ನ ಸಾಹಿತ್ಯವನ್ನು ಹಂಚಿದ್ದಾನೆ. ಅವನ ಪದ್ಯಗಳಲ್ಲಿ ಕಂಡುಬರುವ ಸಾಮಾಜಿಕ ವಿಮರ್ಶೆ ಇಂದಿಗೂ ಎಷ್ಟೊಂದು ಹೊಂದಿಕೆಯಾಗುವಂತಿದೆ! ಜನಜೀವನದಲ್ಲಿ ಬೆರೆತು ಅದರ ಆಗುಹೋಗುಗಳನ್ನೂ ಲೋಪದೋಷಗಳನ್ನೂ ಕಂಡ ಕಣ್ಣಿಗೆ ಅಲ್ಲಿಯ ಚೆಲುವೂ ಒಲವೂ ಕಾಣದೆ ಹೋಗಿಲ್ಲ. ಕರದಿ ಕಪ್ಪರವಿಡಿದು, ಹಿರಿದಾದ ನಾಡಿನಲ್ಲಿ ಹಿಂಡನಗಲಿದ ಗಜದಂತೆ ತಿರುಗಿ ಬಗೆಬಗೆಯ ಅನುಭವಗಳನ್ನು ಪಡೆದ ಅವನ ಮಾತಿಗೆ ನಿಷ್ಠುರವಾದ ತೇಜಸ್ಸಿದೆ. 'ಕೊಂಡಾಡುತಿಚ್ಚೆ ನುಡಿದರೆ ಜಗವೆಲ್ಲ ಮುಂಡಾಡುತಿಹುದು'. ಆದರೂ ಕಂಡುದನ್ನಾಡಲು ಹಿಂಜರಿಯದ ಗಂಡುತನ ಅವನ ಹುಟ್ಟುಗುಣವಾಗಿದ್ದಿತು. ಸತ್ಯಕ್ಕಿರುವ ಹಲವಾರು ಮುಖಗಳನ್ನು ಅರಿತು ತನ್ನ ಕಾವ್ಯದಲ್ಲಿ ಬಿಂಬಿಸಲು ಸಾಧ್ಯವಾಯಿತು. ಸರ್ವಜ್ಞನ ಕಾವ್ಯವನ್ನು ನೀತಿ ಕಾವ್ಯವೆಂದು ಪರಿಗಣಿಸಿದರೂ ಅದರ ವಿಶಿಷ್ಟತೆಯನ್ನು ನಾವು ಒಪ್ಪಬೇಕಾಗುತ್ತದೆ. ಕಾವ್ಯಾಂಶಕ್ಕೆ ಸ್ವಲ್ಪ ಹುಡುಕಾಡಬೇಕಾದೀತು ಅಷ್ಟೆ ಆದರೆ ವಿಚಾರವಂತಿಕೆಯ ಪ್ರಖರತೆ ಅವನ ಕಾವ್ಯದಲ್ಲಿ ಎಲ್ಲೆಡೆಗೂ ಕಂಡುಬರುವ ಗುಣವಾಗಿದೆ. 'ಗಂಧವನು ಇಟ್ಟಮೇಲಂದದಲಿ ಇರಬೇಕು' ಎಂಬುದು ಜೀವನ ವಿಮರ್ಶೆಗೆ ಸಂಬಂಧಪಟ್ಟಂತೆ ಅವನ ಕಾವ್ಯದ ತಿರುಳಾಗಿದೆ. ಸರ್ವಜ್ಞನ ಮನೋಭಾವಕ್ಕೆ, ಅದರ ನಿರೂಪಣೆಗೆ ತ್ರಿಪದಿಯ ಛಂದೋ ಪ್ರಕಾರವು ಸರಿಯಾದ ವಾಹಕವಾಯಿತು. ಕಿಡಿನುಡಿಗಳನ್ನು ಕಿರಿದರಲ್ಲಿ ಮೊಟ್ಟಣಗಟ್ಟಿ, ಹಿಡಿತವಾಗಿಟ್ಟು ಆಯಾ ವಿಚಾರ ವಿಮರ್ಶೆಯನ್ನು ಒಂದೊಂದು ಪದ್ಯದಲ್ಲಿ ಪುಟಿಸುತ್ತ

ಹೋಗಲು ಅನುಕೂಲವಾಯಿತು. ಕುಮಾರವ್ಯಾಸನ ಷಟ್ಪದಿಯಂತೆ, ರತ್ನಾಕರವರ್ಣಿಯ ಸಾಂಗತ್ಯದಂತೆ, ಸರ್ವಜ್ಞನಿಗೆ ತ್ರಿಪದಿ ಕಲಿಯ ಕೈಯ ಕೈದುವಾಯಿತು. 'ದೇಶಿ'ಯ ಚೆಲುವು ಅವನಲ್ಲಿ ಮತ್ತೊಂದು ಮಜಲು ಮುಂದುವರೆಯಿತು. ಜನದ ಭಾಷೆಗೂ ಜನತೆಯ ಪದ್ಯವಾದ ತ್ರಿಪದಿಗೂ ಕಾವ್ಯಗೌರವವನ್ನು ತಂದುಕೊಟ್ಟ ಶ್ರೇಯಸ್ಸು ಅವನಿಗಿದೆ.

ಸರ್ವಜ್ಞ ಮಾತುಬಲ್ಲಾತ. ಅವನ ತಿರುಳ್ಗನ್ನಡ ಶಬ್ದಕೋಶವೂ ಅಗಾಧವಾದುದು. ಅವನ ಪದ್ಯಗಳಲ್ಲಿ ಅದು 'ಯಾತವದು ಸುರಿದಂತೆ' ಹರಿದಿದೆ. "ಮಾತು ಮಾಣಿಕ ಮುತ್ತು" ಎಂಬುದನ್ನು ಅವನು ಚೆನ್ನಾಗಿ ಬಲ್ಲನಾದರೂ ತನ್ನ ಪಾಕದಲ್ಲಿ ಉಪ್ಪು, ಖಾರ, ಹುಳಿಗಳನ್ನು ಯಥೇಚ್ಛವಾಗಿ ಬಳಸಿದ್ದಾನೆ. "ಹೊಲಬ ನರಿಯದ ಮಾತು । ತಲೆಬೇನೆಯೆದ್ದಂತೆ ॥ ಹೊಲಬರಿತು – ಒಂದು ನುಡಿದಿಹರೆ ಅದು ದಿವ್ಯ । ಫಲಪಕ್ವದಂತೆ" ಎಂದವನ ಹೇಳಿಕೆ. ಅವನ ಜೀವನಾನುಭವದ ಪಕ್ವ ಫಲಗಳನ್ನು ಕಾವ್ಯರೂಪದಲ್ಲಿ ಅಲ್ಲಲ್ಲಿ ಸವಿಯುತ್ತೇವೆ. "ಅನುಭವಿಯ ವೇದವೇ ವೇದ" ಎಂಬ ಅವನ ಮಾತಿನ ಸಾರ್ಥಕತೆಯನ್ನು ಅವನ ಪದ್ಯದಲ್ಲಿಯೇ ಮನಗಾಣುತ್ತೇವೆ.

ಇಂಥ ವಿಷಯವೇ ಕವಿತೆ ಬರೆಯಲು ತಕ್ಕುದು ಎಂದು ಅವನು ಗುರುತು ಮಾಡಿಕೊಂಡವನಲ್ಲ. ಈ ಪ್ರಪಂಚದಲ್ಲಿ ಅವನ ಕಣ್ಣಿಗೆ ಬಿದ್ದುದೆಲ್ಲವೂ ಅವನ ಕಾವ್ಯಕ್ಕೆ ವಸ್ತುವಾಗಿದೆ. ಧರ್ಮ, ಅರ್ಥ, ಕಾಮ, ಮೋಕ್ಷ, ನೀತಿ, ಜ್ಞಾನ, ಸದಾಚಾರ, ಲೌಕಿಕ, ಪಾರಮಾರ್ಥಿಕ ಮೊದಲಾದ ಅಂತರಂಗದ ವಿಷಯಗಳಿಗೂ ಅವನ ನುಡಿ ಕಡೆದಿಟ್ಟ ಬೆಣ್ಣೆ. ಅವನು ಶ್ರೇಷ್ಠ ಮಾನವತಾವಾದಿ, "ಭುವನದಾ ಪ್ರಾಣಿಗಳಿಗಾದವನೆ ದೇವ"ನೆಂಬ ಮಾತು ನಮ್ಮ ಎದೆಯನ್ನು ನಾಟಿ ನಿಲ್ಲುತ್ತದೆ. ಒಳಿತಾದುದು ಎಲ್ಲಿದ್ದರೂ, ಯಾರಾದರೂ ಅದನ್ನು ತಲೆಯ ಮೇಲಿಟ್ಟುಕೊಳ್ಳುತ್ತಾನೆ. "ಕೊಲಲಾಗದೆಂಬ ಜೈನನಾಮತವೆನ್ನತಲೆಯ ಮೇಲಿರಲಿ". ಅವನಿಗೆ "ಊರೆಲ್ಲ ನೆಂಟರು; ಕೇರಿಯೆಲ್ಲವು ಬಳಗ; ಧಾರುಣಿಯು ಎಲ್ಲ ಕುಲದೈವ!"

ಸರ್ವಜ್ಞನ ಸಾಮಾಜಿಕ ಪ್ರಜ್ಞೆ ಅದ್ಭುತವಾದುದು. ಸಮಾಜದ, ಅಲ್ಲಿಯ ವ್ಯಕ್ತಿಗಳ ಲೋಪದೋಷಗಳನ್ನೂ ಲೌಕಿಕ ರೀತಿನೀತಿಗಳಲ್ಲಿಯ ಅಸಂಬದ್ಧತೆಯನ್ನೂ ಅವನು ಕಟುವಾಗಿ ಖಂಡಿಸಿದರೂ ಅದರ ಅಡಿಯಲ್ಲಿ ಅಂತಃಕರಣ ಮಿಡಿಯುತ್ತಿದೆ. ಪ್ರಪಂಚದಲ್ಲಿಯ ಅನ್ಯಾಯ ಅನಾಚಾರಗಳನ್ನು ಕಂಡು ಪ್ರಪಂಚದ ಬಗ್ಗೆ ಬೇಸರಪಟ್ಟುಕೊಂಡು ಅತೃಪ್ತಿಯಿಂದ ಗೊಣಗುವುದು ಅವನ ಸ್ವಭಾವವಲ್ಲ. ಅವನ ರೋಷ ಅಸಹನೆಗಳ ಉದ್ದೇಶ ಜನರು ತಮ್ಮ ಬಾಳನ್ನು ಹಸನುಗೊಳಿಸಿಕೊಂಡು

ಒಳಿತಾಗಿ ಬದುಕಬೇಕೆಂಬುದು. ಅಕ್ಕಸಾಲಿಗ, ಬಡಿಗ, ಬಣಜಿಗ, ಗಾಣಿಗ, ಜೇಡ, ಬೇಡ ಇತ್ಯಾದಿ ನೂರೆಂಟು ವ್ಯಕ್ತಿಗಳು ಅವನಿಂದ ನಗಿಸಿಕೊಂಡಿದ್ದಾರೆ. ಸ್ತ್ರೀವಶರಾಗಿ 'ಅಚ್ಯುತನು ಬಿದ್ದ, ಅಜ ಬಿದ್ದ, ದೇವೇಂದ್ರನೆಚ್ಚತ್ತು ಬಿದ್ದ' ಎಂದು ದೇವಾನುದೇವರುಗಳನ್ನೂ ಚುಚ್ಚಿ ನುಡಿದಿದ್ದಾನೆ. 'ಜಗದಿ ಸ್ವತಂತ್ರವೇ ಲೇಸು' ಎಂದು ಸಾರಿದ ಇವನಿಗೆ ಯಾರ ಭಯ? ನಮ್ಮ ಸಾಹಿತ್ಯದಲ್ಲಿ ಇವನನ್ನು ಕೆಲಮಟ್ಟಿಗೆ ಹೋಲುವ ಇನ್ನೊಬ್ಬ ವ್ಯಕ್ತಿಯೆಂದರೆ ವಚನಕಾರನಾದ ಅಂಬಿಗರ ಚೌಡಯ್ಯನೊಬ್ಬನೇ.

ಪ್ರಾಮಾಣಿಕತೆ ಲೋಕಕಲ್ಯಾಣ ದೃಷ್ಟಿಗಳಿಂದಲೇ ಸರ್ವಜ್ಞನ "ನಕ್ಕು ನಗಿಸುವಾ ನುಡಿ" ನಮಗೆ ಲೇಸಾಗಿ ತೋರುತ್ತದೆ. 'ತ್ರಿಣಯನಾ ಮುಕುಟವಾದರೂ ಅಕ್ಕಸಾಲೆ ಟೊಣೆಯದೇ ಬಿಡ'ನಂತೆ! 'ಏಣಾಂಕಧರನು ಧರೆಗಿಳಿಯಲು ಅವನಿಂದ ಗಾಣವಾಡಿಸುವ'ನಂತೆ ಗಾಣಿಗ! 'ಬೋನದ ಮುದ್ದೆ ತಪ್ಪಿದರೆ ನಿದ್ದೆಗಳು ಬಾರವು; ಬುದ್ಧಿಗಳು ತಿಳಿಯವು; ಮುದ್ದಿನ ಮಾತು ಸೊಗಸದು'. 'ನಲ್ಲ ಒಲ್ಲಿಯನೊಲ್ಲ ನೆಲ್ಲಕ್ಕಿ ಬೋನೊಲ್ಲ ಅಲ್ಲವನು ಒಲ್ಲ ಮೊಸರೊಲ್ಲ. ಯಾಕೊಲ್ಲ? ಇಲ್ಲದಕೆ ಒಲ್ಲ'ನಂತೆ. ಹೀಗೆಯೇ ಹಲವಾರು ನಗೆನುಡಿಗಳನ್ನಿಲ್ಲಿ ಉದಾಹರಿಸಬಹುದು. "ಕಿವಿಯಿಂಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪುಗುಗುಂ" ಎಂಬ ಪಂಪನ ಮಾತನ್ನಿಲ್ಲಿ ನೆನೆಯಬಹುದು.

ಸರ್ವಜ್ಞನ ಆಂತರಿಕ ಪ್ರಜ್ಞೆ ಸದಾ ಜಾಗ್ರತವಾದುದು. ಇವನು ನಡೆಸಿದ ಸತ್ಯಾನ್ವೇಷಣೆ ಅವನನ್ನು ಅನುಭಾವಿಯ ಮಟ್ಟಕ್ಕೂ ಒಯ್ದಿದೆ. 'ನುಡಿಯಲ್ಲಿ ಎಚ್ಚತ್ತು! ನಡೆಯಲ್ಲಿ ತಪ್ಪಿದರೆ । ಹಿಡಿರ್ದ ಧರ್ಮ ಹೊಡಮರಳಿ ಕಚ್ಚುವಾ ಹೆಡೆನಾಗ ನೋಡ' ಎಂದು ಎಚ್ಚರಿಸುತ್ತಾನೆ. 'ಬೆಳಗ ನುಂಗಿದ ಗುರುವ । ನೊಳಗ ನುಂಗಿದ ಶಿಷ್ಯ' ಕರ್ಮದ ಕಳೆಯ ಕಳೆಯುವನು. 'ಧ್ಯಾನದಾ ಹೊಸ ಬತ್ತಿ । ಮೌನದಾ ತಿಳಿದುಪ್ಪ । ಸ್ವಾನುಭವವೆಂಬ-ಬೆಳಗಿನಾ ಜ್ಯೋತಿ । ಅಜ್ಞಾನವನ್ನು ಸುಡುಗು'. 'ಕಾಯ ಕಮಲವೆ ಸೆಜ್ಜೆ । ಜೀವರತುನವೆ ಲಿಂಗ । ಭಾವ ಪುಷ್ಪದಿಂ ಶಿವಪೂಜೆ ಮಾಡುವನ । ದೇವನೆಂದೆಂಬೆ' -ಇಂಥ ಮಾನಸ ಪೂಜೆಯೇ ಶ್ರೇಷ್ಠವಾದುದು. 'ಆಗಿಲ್ಲ ಹೋಗಿಲ್ಲ । ಮೇಗಿಲ್ಲ ಕೆಳಗಿಲ್ಲ । ತಾಗಿಲ್ಲ ತಪ್ಪು ತಡೆಯಿಲ್ಲ, ಲಿಂಗಕ್ಕೆ । ದೇಗುಲವೆ ಇಲ್ಲ' ಎಂಬ ವಿಶಾಲದರ್ಶನ ಅವನದಾಗಿದೆ. ಈ ಪದ್ಯಗಳಲ್ಲಿಯ ಕವಿಹೃದಯದ ಚಿಂತನ, ಅವನ ಅನುಭವದ ಮಂಥನ ನಮ್ಮ ಹೃದಯವನ್ನು ಸೆರೆಹಿಡಿಯುತ್ತದೆ. "ಧ್ಯಾನದಾ ಹೊಸ ಬತ್ತಿ' ಎಂಬ ಮಾತನ್ನೇ ತೆಗೆದುಕೊಳ್ಳಬಹುದು. 'ಧ್ಯಾನ' ಎಂದಿಗೂ ಹಳೆಯದಾಗದು. ಬತ್ತಿಯನ್ನು ಹೊಸ ಹೊಸೆದಂತೆ ಹೇಗೆ ಹುರಿಗೊಳ್ಳುತ್ತದೆಯೋ ಹಾಗೆಯೇ ಧ್ಯಾನವೂ ಗಟ್ಟಿಗೊಳ್ಳುತ್ತದೆ. ಅದಕ್ಕೆ ಮೌನವೇ

ತಿಳಿದುಪ್ಪ. ಸ್ವಾನುಭವದ ಜ್ಯೋತಿ ಅದರಿಂದ ಹೊಮ್ಮಿ ಅಜ್ಞಾನದ ಕತ್ತಲೆಯನ್ನು ಕಳೆಯುತ್ತದೆ. ಹಾಗೆಯೇ ಕಾಯಕಮಲ ಜೀವರತುನ, ಭಾವಪುಷ್ಪ. ಈ ರೂಪಕಗಳ ಔಚಿತ್ಯವನ್ನೂ ಗಮನಿಸಬಹುದು. ಆಗು-ಹೋಗು, ಮೇಗು-ಕೆಳಗು, ತಾಗು-ತಪ್ಪು ಈ ಜೋಡುನುಡಿಗಳಲ್ಲಿರುವ ಅರ್ಥ ಶಕ್ತಿಯನ್ನು ಕೊನೆಯ ಪದ್ಯ ಸಮರ್ಥವಾಗಿ ಹೊರಹೊಮ್ಮಿಸಿದೆ. ಸರ್ವಜ್ಞ ಕುಲರಸಿಕ, ಶೃಂಗಾರ ಪ್ರಿಯತೆಯೊಂದೇ ರಸಿಕತೆಯ ಲಕ್ಷಣವಲ್ಲ. ಹೆಣ್ಣಿನ ಬಣ್ಣನೆಯೇ ಅದರ ಗುರಿಯಲ್ಲ. ಜೀವನದಲ್ಲಿಯ ಸೊಗಸನ್ನು ಅರಿತು ಆಹ್ಲಾದಗೊಳ್ಳುವ ಗುಣ ರಸಿಕನಲ್ಲಿ ಅವಶ್ಯವಾಗಿರಬೇಕು. ಸರ್ವಜ್ಞನಲ್ಲಿ ಅದು ಸಾಕಷ್ಟಿದೆ. 'ಅಂಗನೆಯು ಗುಣಿಯಾಗಿ । ಅಂಗಳದಿ ಹೊರಸಾಗಿ । ತಂಗಾಳಿ ಜೊನ್ನದಿರುಳಾಗೆ । ಬೇಸಗೆಯು । ಹಿಂಗದಿರಲೆಂದ' 'ಬೆಚ್ಚನಾ ಮನೆಯಾಗೆ । ವೆಚ್ಚಕ್ಕೆ ಹೊನ್ನಾಗೆ । ಇಚ್ಛೆಯನರಿವ ಸತಿಯಾಗೆ ಸ್ವರ್ಗಕ್ಕೆ । ಕಿಚ್ಚು ಹಚ್ಚೆಂದ' ರಸಿಕನಾದವನು ಇದ್ದ ಪರಿಕರಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ಸುಖಪಡುತ್ತಾನೆ. ಬಿರುಬೇಸಗೆಯೂ ಅವನಿಗಾಹ್ಲಾದದಾಯಕವೇ. ಆದರೆ ಅದಕ್ಕೆ ತಂಗಾಳಿಯಿಂದೊಡಗೂಡಿದ ಬೆಳುದಿಂಗಳ ಇರುಳಾಗಬೇಕು; ಅಂಗಳದಲಿ ಒಂದು ಹೊರಸಿರಬೇಕು. ಇವುಗಳ ಸವಿಯನ್ನು ಹೆಚ್ಚಿಸಲು ಜೊತೆಯಲ್ಲಿ ಗುಣಿಯಾದ ಅಂಗನೆ ಇರಬೇಕು.

ಲೇಸು ಪದ್ಧತಿಯ ವಚನಗಳಲ್ಲಿ ಅವನ ಜೀವನ ರಸಿಕತೆ, ಪ್ರಪಂಚದ ಜ್ಞಾನ ಸಮರಸಗೊಂಡಿವೆ. ಸುಟ್ಟ ಬೆಳಸಿ, ಅಟ್ಟ ಬೋನ, ಕಟ್ಟಾಣಿ ಸತಿ ಇರೆ ಲೇಸು, ಉದ್ದಿನಾವಡೆ, ಬುದ್ಧಿಯಾ ನುಡಿ, ಶಿಶುವಿನ ಮುದ್ದಾಟ ಲೇಸು. ಮಜ್ಜಿಗೆ ಊಟಕ್ಕೆ ಲೇಸು, ಕಜ್ಜಾಯ ತುಪ್ಪ ಉಣಲೇಸು, ಮನೆಗೊಬ್ಬ ಅಜ್ಜಿ ಲೇಸು, ಕೂರ್ಪವರ ಕಾಣುವದೆ ಲೇಸು-ಚೆನ್ನಾಗಿದೆ. ಹರಕು ಹೋಳಿಗೆ, ಮುರುಕು ಹಪ್ಪಳ, ಕುರು ಕುರು ಕಡಲೆ, ಪಾಯಸದ ಸುರುಕು ಬಲು ಲೇಸು. ಅರಿಕೆಯುಳ್ಳವರ ಕೆಳೆ ಲೇಸು, ತುಪ್ಪ ಓಗರ ಲೇಸು, ಉಪ್ಪರಿಗೆ ಮನೆ ಲೇಸು, ಅಪ್ಪ ಬಾರೆಂಬ ಮಗ ಲೇಸು; ಅಲ್ಲವೆ? ಗಿಡ್ಡ ಹೆಂಡತಿ ಲೇಸು. ಹೌದೇನು? ಎಮ್ಮೆ ಹಯನ, ಕಮ್ಮನಂಬಲಿ ಉಂಡವರಿಗೇ ಗೊತ್ತು. ಜಾಣೆಯ ನುಡಿ, ವೀಣೆಯ ಸ್ವರ ಲೇಸಲ್ಲದೇ ಏನು? ಇವಕ್ಕೆಲ್ಲ ಬೇರೆ ವಿವರಣೆಯೇಬೇಕಿಲ್ಲ. ನಿಂದಾ ಪದ್ಧತಿಯಲ್ಲೂ ಹಾಗೆಯೇ. ನಮ್ಮ ಅನುಭಕ್ಕೆ ತೀರ ಸಮೀಪವಾದುದನ್ನೇ ಆತ ತಟ್ಟನೆ ಎತ್ತಿಕೊಳ್ಳುತ್ತಾನೆ; ಸಂತೆಯಾ ಮನೆಹೊಲ್ಲ । ಚಿಂತೆಯಾ ತನು ಹೊಲ್ಲ । ಎಂತೊಲ್ಲದವಳ ರತಿ ಹೊಲ್ಲ । ಬಿತ್ತದಾ ಹೊಲ ಹೊಲ್ಲ । ಮೆತ್ತದಾ ಮನೆ ಹೊಲ್ಲ । ಚಿತ್ತಬಂದತ್ತ ತಿರುಗುವಾ ಮಗ ಹೊಲ್ಲ । ಬತ್ತಲಿರಹೊಲ್ಲ ॥

ಈ ಲೋಕದಲ್ಲಿ 'ಅಂತಿಕ್ಕು ಇಂತಿಕ್ಕು ಎಂತಿಕ್ಕು ಎನಬೇಡ ಚಿಂತಿಸುವ ದೇಹ ಬಡವಕ್ಕು, ಶಿವ ತೋರಿದಂತಿಹುದೆ ಲೇಸು' ಎಂಬ ಧೈರ್ಯವನ್ನೂ ದುಃಖವನ್ನು ಕಲ್ಪಿಸಿಕೊಂಡು ತಲೆಯಮೇಲೆ ಕೈ ಹೊತ್ತುಕೊಂಡು ಕೂಡಬೇಡ, 'ಬೇನೆಯದು ಬಂದಾಗ ನರಳು' ಎಂದೂ ಸರ್ವಜ್ಞ ಸರಿಯಾಗಿ ಬದುಕುವ ರೀತಿಯನ್ನು ಹೇಳಿದ್ದಾನೆ.

ಸರ್ವಜ್ಞ ಕವಿ ಬೇರಾವ ಕವಿಗಳ ಪ್ರಭಾವಕ್ಕೂ ಒಳಗಾದಂತೆ ಕಾಣುವದಿಲ್ಲ. ವಚನಕಾರರ ಶೈಲಿ, ನುಡಿಗಟ್ಟುಗಳನ್ನು ಮಾತ್ರ ಅಲ್ಲಲ್ಲಿ ಕಾಣುತ್ತೇವೆ; ಅಷ್ಟೆ. ಜನಸಮಾನ್ಯರ ಅನುಭವಕ್ಕೆ ನಿಲುಕದ ಉಪಮೆ ರೂಪಕಗಳು ಅವನಲ್ಲಿ ತೀರ ಕಡಿಮೆ. ತನ್ನ ಸುತ್ತು ಮುತ್ತಣ ಜೀವನದ ಸೂಕ್ಷ್ಮ ನಿರೀಕ್ಷಣೆಯಿಂದ ಹೊತ್ತಿಗೊದಗುವ ವಾಸ್ತವಿಕ ಉಪಮೆಗಳನ್ನು ಆಯ್ದುಕೊಂಡು, ಹೇಳುವ ಮಾತು ಹುಸಿಹೋಗದಂತೆ, ಹಸಿಗೋಡೆಯಲ್ಲಿ ಹರಳಿಟ್ಟಂತೆ ತನ್ನ ಪದ್ಯಗಳನ್ನು ಪುಷ್ಟಿಗೊಳಿಸಿದ. ಈ ಕೆಲವು ಹೋಲಿಕೆಗಳನ್ನು ಗಮನಿಸಬಹುದು.

'ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ', 'ಬೆಳ್ಳುಳ್ಳಿ ಪೊಡೆಯೆ ಹೋಳಪ್ಪ ತೆರನಂತೆ' 'ಉರಿತಗ್ಗಿ ಉದಕ ಕಂಡಂತೆ', 'ಕಳ ಹೋಗಿ ಕೆಮ್ಮಿದಂತೆ', 'ಒಡಲೆಂಬ ಹುತ್ತಕ್ಕೆ ನುಡಿವ ನಾಲಗೆ ಸರ್ಪ', 'ಕೂಪದೊಳು ನೇಣು ಹರಿದಂತೆ', 'ದಾನವೆಂದರೆ ತಲೆಯ ಚಾಣದಲ್ಲಿ ಕಡಿದಂತೆ' ಇತ್ಯಾದಿ.

ಜನತೆಯ ಕವಿಯಾದ ಸರ್ವಜ್ಞನು ಜನಮನದ ಸಾಕ್ಷಿಯಂತಿರುವ ಗಾದೆಗಳನ್ನು ಧಾರಾಳವಾಗಿ ಬಳಸಿದ್ದಾನೆ. 'ವೇದವೇ ಹಿರಿದೆಂದು ವಾದವನು ಮಾಡುವಿರಿ, ಅನುಭವಿಯ ವೇದವೇ ವೇದ'ವೆಂದು ಅವನೇ ಸಾರಿದ್ದಾನೆ. ಇನ್ನು ಹಲವು ವಾಕ್ಯಗಳು ಅನುಭವದ ಸಾರವನ್ನೊಳಗೊಂಡು ಪ್ರಯೋಗಜಾಣ್ಮೆಯಿಂದ ಆಮೇಲೆ ಗಾದೆಗಳಾಗಿ ಜನರಲ್ಲಿ ರೂಢಿಯಾಗಿರಲೂಬಹುದು. ಸರ್ವಜ್ಞನ ಸಾರವತ್ತಾದ ಬರವಣಿಗೆಗೆ ಈ ಗಾದೆಗಳು ತಕ್ಕ ಉದಾಹರಣೆಗಳಾಗುವವು. ಇವುಗಳಲ್ಲಿ ಹೆಚ್ಚಿನವು ಪ್ರಶ್ನಾರ್ಥಕವಾಗಿದ್ದು ತ್ರಿಪದಿಯ ಒಂದು ಸಾಲಾಗಿವೆ. ಸಹಜವಾದ ಅನುಪ್ರಾಸದ ಸೊಗಸು ಇವುಗಳಲ್ಲಿ ಹೇರಳವಾಗಿ ದೊರೆಯುತ್ತದೆ.

'ಊರಿಂಗೆ ದಾರಿಯನು ಆರು ತೋರಿದರೇನು?' 'ತುಪ್ಪವಾದಾ ಬಳಿಕ ಹೆಪ್ಪನೆರೆದವರುಂಟೆ?' 'ಉರಿಯುಂಡ ಕರ್ಪುರವು ಸರಕು ಮಾರುವುದುಂಟೆ?' ಇತ್ಯಾದಿ...

ಸಮಕಾಲೀನ ಪ್ರಜ್ಞೆ, ಬಳಕೆಯ ಮಾತಿನ ಪ್ರಯೋಗ, ವಾಸ್ತವಿಕ ಉಪಮೆಗಳು, ತೇಜಸ್ವಿಯಾದ ಅನುಭಾವ ಮತ್ತು ವಿಡಂಬನ–ಇವುಗಳಿಂದ ಸರ್ವಜ್ಞ ಇಂದಿನ

ಕವಿಗಳಿಗೆ ಸಮೀಪದ ಬಂಧುವಾಗಿದ್ದಾನೆ. ಅವನ ಭಾಷೆ ಜಾನಪದ ಭಾಷೆಯಂತೆ ತೋರಿದರೂ ಅದು ಭಾವಪ್ರಧಾನವಾಗಿರದೆ ಬೌದ್ಧಿಕ ಸಂಸ್ಕಾರವನ್ನು ಹೊಂದಿ ಚುರುಕಾಗಿದೆ. ಅದಕ್ಕೆ ಮುಚ್ಚುಮರೆ ಗೊತ್ತಿಲ್ಲ. ಸ್ವಚ್ಛ ಮನಸ್ಸಿನ ಬಿಚ್ಚು ಮಾತಿಗಾಗಿ ನಾವು ಸರ್ವಜ್ಞನ ಜೊತೆಗೆ ಕೆಲವೇಳೆ ಕಳೆದರೆ ನಮ್ಮ ಮನಸ್ಸಿನ ಆರೋಗ್ಯ ಹೆಚ್ಚುವುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಅವನದು ಹೊಲಬರಿತು ಹೊತ್ತಿಗೊದಗುವ ಮಾತು. ಅವನ ತ್ರಿಪದಿಗಳನ್ನು ಬರಿ ಓದಿದರೆ ಸಾಲದು, ಅವುಗಳ ಒಡಲನ್ನರಿಯಬೇಕು.

**"ಓದಿದಾ ಓದು ತಾ । ಮೇದ ಕಬ್ಬಿನ ಸಿಪ್ಪೆ**
**ಓದಿನಾ ಒಡಲನರಿತಿಹರೆ । ಸಿಪ್ಪೆ**
**ಕಬ್ಬಾದಂತೆ ಸರ್ವಜ್ಞ॥"**

*(ಸಾಹಿತ್ಯ ಚಿಂತನ, ೧೯೬೬)*



೮



# ಮುಪ್ಪಿನ ಷಡಕ್ಷರಿಯ ಮುಪ್ಪರಿಯದ ಹಾಡುಗಳು

ಕನ್ನಡದಲ್ಲಿ ಹಾಡುಗಬ್ಬಗಳ ಪರಂಪರೆ ಇಂದಿನವರೆಗೆ ಫಲಿಸಿಕೊಂಡು ಬಂದಿರುವುದು ಅದರ ಅಚ್ಚುಮೆಚ್ಚಿಗೆ ಸಾಕ್ಷಿಯಾಗಿದೆ. ವಚನದಲ್ಲಿ ಕುಡಿಯೊಡೆದು, ತ್ರಿಪದಿಯಲ್ಲಿ ಮಿಡಿಯಾಗಿ, ಷಟ್ಪದಿ ಸಾಂಗತ್ಯದಲ್ಲಿ ಪಾಡಾಗಿ ಹಾಡುಗಳಲ್ಲಿ ಹಣ್ಣಾಗಿದೆ ಈ ಗೀತ ಸಂಪ್ರದಾಯ. ನಿಜಗುಣಶಿವಯೋಗಿಗಳು ನಿಜಾನಂದದಲ್ಲಿ ನುಡಿಸಿದ ಈ ರಾಗರಸದ ತರಂಗಿಣಿ ಅನೇಕ ಶಾಖೋಪಶಾಖೆಗಳಿಂದ ತುಂಬುಹೊನಲಾಗಿ ಹರಿದುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಮನಾರ್ಹವಾದ ಸಂಗತಿಯಾಗಿದೆ. ಪ್ರಾರಂಭದಲ್ಲಿಯೇ ಅಪೂರ್ವ ಪ್ರತಿಭೆಯ ಅಸಾಧರಣ ವ್ಯಕ್ತಿತ್ವದ ನಿಜಗುಣರಿಂದ ದೀಕ್ಷೆ ದೊರೆತುದು ಅದರ ಸೌಭಾಗ್ಯವೆಂದೇ ಹೇಳಬಹುದು. ಮುಂದೆ ಅನೇಕ ಶಿವಯೋಗಿಗಳೂ ದಾಸವರೇಣ್ಯರೂ ಭಕ್ತಿಯಾವೇಶ, ಶಕ್ತಿಯುತವಾದ ಸಾಮಾಜಿಕ ವಿಮರ್ಶೆಗಳಿಂದ ಈ ಗೀತಪ್ರವಾಹದ ಪಾತ್ರವನ್ನು ವಿಶಾಲಗೊಳಿಸಿದರು.

ವೀರಶೈವ ಶಿವಯೋಗಿಗಳ ಪರಂಪರೆಯಲ್ಲಿ ನಿಜಗುಣಾರ್ಯರ ತರುವಾಯ ಮುಪ್ಪಿನ ಷಡಕ್ಷರದೇವರ ಉಜ್ವಲ ವೈರಾಗ್ಯಮೂರ್ತಿ ನಮ್ಮೆದುರು ಕಂಗೊಳಿಸುತ್ತದೆ. ಧರೆಯ ಭೋಗಭಾಗ್ಯವನ್ನೆಲ್ಲ ತೊರೆದು ಹಲವು ಭವಭೀತಿಯ ಚಿಂತೆಯಿಲ್ಲದೆ ಕುಂತು-ತುರಹ ಶಿವಷಡಕ್ಷರಿಯ ಲಿಂಗವನ್ನು ತನ್ನೊಳಗೆ ನಿಶ್ಚಿಂತವಾಗಿಟ್ಟುಕೊಂಡು ಸಹಜಾನಂದದಲ್ಲಿ ಮಿಡಿಯುತ್ತಿರುವ ಇವರ ಹೃದಯವೀಣೆಯ ನಾದಸೇತು ಪ್ರಪಂಚದ ಹಲವು ಕೋಟಲೆಗಳಲ್ಲಿ ಮುಳುಗಿದ ಮಾನವನಿಗೆ ಪಾತಾಳಗರುಡಿಯಾಗಿ ಪರಿಣಮಿಸುತ್ತದೆ. ರೂಢಿಗೀಶನನ್ನು ತಮ್ಮ ದೈವವಾಗಿ ಇಟ್ಟುಕೊಂಡಮೇಲೆ ನರರನ್ನು

ಕಾಡಿಬೇಡಿ ಬಳಲುವುದಾದರೂ ಏತಕ್ಕೆ? ಮೃಡನ ಪೂಜೆ ಮಾಡುವುದಕ್ಕೆ ಮಡುವಿನ ಅಗ್ಗವಣಿಯುಂಟು. ಅಡವಿಯಲ್ಲಿ ಕಾಡಪತ್ರಿ ಪುಷ್ಪವುಂಟು. ಒಡಲಿಗನ್ನ ದುಡಿದರುಂಟು. ಶಯನಕ್ಕೆ ಗುಡಿಗಳಿವೆ. ಒಡೆಯರು ಬಿಸುಟಿದರುವೆ ಶೀತವೆನಿಸಿದರೆ ಹೊದೆದರಾಯಿತು. ಬುದ್ಧಿಯನ್ನು ಹೇಳುವುದಕ್ಕೆ ಆದ್ಯರ ವಚನಗಳಿವೆ; ಉದ್ಧಾರವಾಗಲು ಶಿವನ ಮಂತ್ರವಿದೆ; ಅನುಭಾವಿಗಳನ್ನು ಅಗಲದೆ ಇದ್ದರೆ ಸಾಕು. ಅಂದಮೇಲೆ ನರರ ಮಾಳ್ಕೆಯಿಂದ ಅವರು ಬೆಡಗುಗೊಳ್ಳುವ ಪ್ರಮೇಯವೇ ಇಲ್ಲ. ಈ ವೀರ ವಿರತಿಯ ನಿತ್ಯ ತೃಪ್ತಿಯು ಮುಪ್ಪಿನಾರ್ಯರಲ್ಲಿ ಸ್ಫಟಿಕದ ಸಲಾಕೆಯಂತೆ ಒಡೆದು ಕಾಣುತ್ತದೆ.

ಸರ್ವಾರ್ಪಣಭಾವ ಮುಪ್ಪಿನಾರ್ಯರ ವ್ಯಕ್ತಿತ್ವದ ಜೀವಾಳವೆನ್ನಬಹುದು. "ಎನ್ನ ಸರ್ವಾಂಗವನು ನಿನ್ನ ಪರಿಣಾಮಕ್ಕೆ ಚೆನ್ನಾಗಿ ಸಲಿಸುವೆನು ಎಲೆ ಲಿಂಗವೆ" ಎಂಬುದು ಇವರ ಜೀವನದ ಪಲ್ಲವಿಯಾಗಿದೆ. ಚೆನ್ನ ಷಡಕ್ಷರಿ ಲಿಂಗಕ್ಕೆ ಇವರ ಹೃದಯವು ಉನ್ನತದ ಮನೆ; ಮುಖವು ಮುಖಶಾಲೆ; ನವಚಕ್ರಗಳು ನವನೆಲೆಯ ಹೊನ್ನುಪ್ಪರಿಗೆಯಾಗಿವೆ. ಹೃತ್ಕಮಲವು ಮಂಚವಾಗಿ, ಜ್ಞಾನವು ತಲೆಗಿಂಬಾಗಿ, ಆಚಾರವು ಚರಣಭಟನಾಗಿದ್ದಾನೆ.

**"ಎನ್ನ ನಯನವು ನಿಮಗೆ**
**ರನ್ನವೆಳಗಿನ ಜ್ಯೋತಿ**
**ಎನ್ನ ಪ್ರಾಣವು ನಿಮಗೆ**
**ಮನ್ನಣೆಯ ತಾಂಬೂಲ**
**ಹೊನ್ನಪಡಿಗಮದಾಗಿ ಮೆರೆದಿರ್ಪುದು"**

ಎಂದು ಮುಪ್ಪಿನ ಷಡಕ್ಷರಿದೇವರು ಎದೆದುಂಬಿ ಹಾಡಿದ್ದಾರೆ. ಹೀಗೆ ಸರ್ವಾಂಗವನ್ನು-ಮುಂದಾಗಿ ಪ್ರಾಣವನ್ನೂ-ಲಿಂಗಕ್ಕೆ ಸಲ್ಲಿಸಿ ನಿಶ್ಚಿಂತರಾಗಿದ್ದಾರೆ. ತಮ್ಮ ಕಾಯವನ್ನೇ ಲಿಂಗದೇವನಿಗೆ ಉನ್ನತಾಲಯವನ್ನಾಗಿ ಮಾಡಿ ನಿರ್ಭಯರಾಗಿದ್ದಾರೆ. ಅವರ ಸಮತೆಯೆ ಜಲವಾಗಿ, ಸದ್ಗುಣವೇ ಗಂಧವಾಗಿ, ನಿತ್ಯತ್ವವೇ ಅಕ್ಷತೆಯಾಗಿ, ಜ್ಞಾನವೇ ಪುಷ್ಪವಾಗಿ, ಭಕ್ತಿಯೇ ಭೋಗವಾಗಿ, ಮನವೇ ಪೂಜಾರಿಯಾಗಿ, ಅರ್ಪಿತವಾಗಿವೆಯೆಂದಮೇಲೆ 'ನಾನು-ನನ್ನದು', ಎಂಬುದು ಇನ್ನೇನುಳಿಯಿತು? ಕಾಮಕಾಲಗಳಿಂದ ನಿರ್ನಾಮ ಮಾಡುವ ಮಾಯೆಯನ್ನು ಛೀಮಾರಿ ಮಾಡಿ ಮೊದಲೇ ಲಿಂಗಕ್ಕೆ ಮೊರೆಹೊಕ್ಕಿದ್ದಾರೆ. ಲಿಂಗದಲ್ಲಿಯ ಅವರ ನಿಷ್ಠೆ ನಿಸ್ಸೀಮವಾದುದು. 'ಎನ್ನ ಕರದೊಳಗಿರ್ದು ಎನ್ನೊಳೇತಕೆ ನುಡಿಯೆ ಎನ್ನ ಭವಭವದಲ್ಲಿ ಬಿಡದಾಳ್ದನೆ?' ಎಂದು ಸಲುಗೆಯಿಂದ ಬಿನ್ನವಿಸುತ್ತಾರೆ. 'ಎನ್ನೊಡನೆ ನುಡಿಯದಿರೆ ನಿನ್ನನಾ

ಭವಭವದಿ ಬೆನ್ನ ಬಿಡುವೆನೆ ಷಡಕ್ಷರಿ ಲಿಂಗವೇ' ಎಂಬ ಹಾಡಿನ ಭಾವಸೌಂದರ್ಯ ಅವರ್ಣನೀಯವಾಗಿದೆ.

ಹರನಲ್ಲಿ ಇವರು ವರವನ್ನು ಬೇಡಿದರೂ ಶರಣಂಗೆ ಭೃತ್ಯನಾಗಿರಿಸೆಂದೇ ಕೇಳಿಕೊಳ್ಳುವ ಇವರ ಸೇವಾಭಕ್ತಿಯು ಆಧ್ಯಾತ್ಮಿಕ ಪ್ರಗತಿಯ ಉನ್ನತ ಮೆಟ್ಟಿಲಾಗಿದೆ. ಶರಣರಲ್ಲಿ ಶಿವನಿರುವುದರಿಂದ ಸಕಲ ಶರಣಗಣ ಅಲ್ಲಿ ಮೆರೆದಿದೆ. ಅವರ ಅಂಗಳ ನಿತ್ಯ ಶಿವಲೋಕವಾಗಿರುವದರಿಂದ ಅವರ ಘನತೆಗೆ ಇನ್ನಾವುದನ್ನೂ ಅವರು ಸರಿಕಾಣರು. ಅವರ ಕಿಂಕರನಾಗಿ, ಅವರ ಪಾದವ ತೊಳೆದು, ಪಡಿಗವ ಬೆಳಗಿ ತೊಳೆದು ತಂದು, ಹಾವುಗೆ ಪಿಡಿದು ಅವರಡಿಗಳನ್ನು ಒರೆಸಿ, ಅವರಿಚ್ಛೆಯಲ್ಲಿಯೇ ಇರುವ ವರವನ್ನು ಹಾರೈಸಿದ್ದಾರೆ. ಅವರುಂಡು ಮಿಕ್ಕುದನ್ನು, ಅವರುಂಡು ಬಿಟ್ಟುದನ್ನು ಅವರುಗಿದ ತಾಂಬೂಲವನ್ನು ಸವಿದು, ಅವರಂಗಳವನ್ನು ಗುಡಿಸಿ ಬಾಗಿಲ ಕಾಯ್ದು, ಅವರ ಎತ್ತಾಗಿ ತೊತ್ತಾಗಿ ಪಶುವಾಗಿ ಅವರನ್ನು ಭವಭವದಲ್ಲಿ ಬಿಡದೆ ಇರುವದನ್ನು ಪಾಲಿಸೆಂದು ಈ ಋಷಿಕವಿ ಬೇಡಿಕೊಂಡಿದ್ದಾನೆ. ಯಾಕೆಂದರೆ ಶಿವನ ಘನದಿಂದ ಶಿವಶರಣರ ಘನವು ಅತ್ಯಧಿಕ, ಅತ್ಯುನ್ನತ.

ಉದಾತ್ತ ಭಾವದ, ವಿಶಾಲ ಹೃದಯದ ದರ್ಶನಶುದ್ಧಿ ಮುಪ್ಪಿನಾರ್ಯರ ತತ್ವಜ್ಞಾನದ ಹೊಂಗಳಸವಾಗಿ ಅವರ ಹಾಡುಗಳಲ್ಲಿ ಕಂಗೊಳಿಸುತ್ತದೆ. ಅನುಭಾವದ ತುತ್ತತುದಿಯಲ್ಲಿ ನಿಂತು ತನ್ಮಯತೆಯಿಂದ ನುಡಿಯುವ ಅವರ ಹೃದಯವೀಣೆಯ ಮಂಜುಳ ನಿನಾದ ಇಡಿಯ ವಿಶ್ವವನ್ನೇ ತರಂಗ ತರಂಗವಾಗಿ ವ್ಯಾಪಿಸಿಕೊಳ್ಳುತ್ತದೆ. ಅಪೂರ್ಣ ದೃಷ್ಟಿಯ ಸಂಕುಚಿತತನವನ್ನು ಮುಳುಗಿಸಿ ಪ್ರಪೂರ್ಣ ದೃಷ್ಟಿಯ ವಿಶಾಲಭಾವನೆಯನ್ನು ತಾನೇತಾನಾಗಿ ಪಸರಿಸಲು ಸರ್ವಸಮರ್ಥವಾಗಿದೆ.

**"ಅವರವರ ದರುಶನಕೆ**
**ಅವರವರ ವೇಷದಲಿ**
**ಅವರವರಿಗೆಲ್ಲ ಗುರು ನೀನೊಬ್ಬನೆ.**
**ಅವರವರ ಭಾವಕ್ಕೆ**
**ಅವರವರ ಪೂಜೆಗಂ**
**ಅವರವರಿಗೆಲ್ಲ ಶಿವ ನೀನೊಬ್ಬನೆ.**
**ಹೋರಾಟವಿಕ್ಕಿಸಲು**
**ಬೇರಾದೆಯಲ್ಲದೆ**
**ಬೇರುಂಟೆ ಜಗದೊಳಗೆ ಎಲೆ ದೇವನೆ**
**ಆರು ಅರಿಯರು ನೀನು**

**ಬೇರಾದ ಪರಿಗಳನು**
**ಮಾರಾರಿ ಶಿವಷಡಕ್ಷರಿ ಲಿಂಗವೆ"**

ಯುಗಯುಗಕ್ಕೂ, ದ್ವೇಷಾಸೂಯೆಗಳಲ್ಲಿ ತೊಳಲುವ ಜಗಕ್ಕೂ ಶಾಂತಿಯ ಬಾವುಟವಾಗಿ ನಿಂತಿದೆ ಈ ಪದ್ಯ. ಮುಪ್ಪಿನಾರ್ಯರ ಪ್ರಾಸಾದಿಕ ವಾಣಿಯಲ್ಲಿ ಕಂತುಹರ ಷಡಕ್ಷರಿಲಿಂಗದ ಅಪೂರ್ವ ಕಾಂತಿ ಪಡಿಮೂಡಿದೆ.

ಷಡಕ್ಷರಿಯ ಭಾವತರಂಗಿಣಿ ಅಲ್ಲಲ್ಲಿ ರೂಪಕದಲ್ಲಿ ಎರಕಹೊಯ್ದು ಸುಂದರವಾದ ಸರೋವರಗಳನ್ನು ನಿರ್ಮಿಸಿದೆ. ನೆಲೆನಿಂತ ಆ ತಿಳಿಜಲ ನೀಲಾಗಸವನ್ನೂ ಅಲ್ಲಿ ಆಡುವ ಮೋಡದ ಬೆಡಗನ್ನೂ ಪಡಿಮೂಡಿಸುವಂತೆ ಇವರ ಭಾವರೂಪಕಗಳು ಓದುಗರ ಮನಸ್ಸನ್ನು ಸೆರೆಹಿಡಿದು ನಿಲ್ಲಿಸುತ್ತ ಬೇರೆ ಒಂದು ಸೊಗಸನ್ನು ಬೀರುತ್ತವೆ. "ನಿಮ್ಮನ್ನು ನಾನು ನೆಮ್ಮಿಕೊಂಡಿದ್ದೇನೆ, ಗಮ್ಮನೇ ಎನ್ನನ್ನು ಕರೆಯ ಬನ್ನಿ" ಎಂಬ ಹೆಮಗಳ ರೂಪಕ ಅದೆಷ್ಟು ಸೊಗಸಾಗಿದೆ? ಪುರಾತನ ಶರಣರಿಗೆಲ್ಲ ಸುವ್ವಿ ಹಾಡಿ ತಮ್ಮವರನ್ನು ಯಾವಾಗಲೂ ಹಾಡಿ ಹರಸುತ್ತಿರುವ ಈ ಶರಣ ಜೀವ ತಮ್ಮವರು ಬರುವುದನ್ನು ಉಮ್ಮಳಿಸಿ ನೋಡುತ್ತಿದೆ. ಕುಟ್ಟುತ್ತ ಬೀಸುತ್ತ ಒಡಹುಟ್ಟಿದ ಪುರಾತನರನ್ನು ನೆಟ್ಟನೇ ನೆನೆಸುತ್ತದೆ. "ಕಷ್ಟಮಯವಾದ ಮರ್ತ್ಯದ ಬಟ್ಟೆಯನೊಲ್ಲೆ ಕೃಪೆ ಹುಟ್ಟದೇ, ನಮ್ಮವರು ಕರೆಯಿರಯ್ಯ" ಎಂದು ಮೊರೆಯಿಡುತ್ತದೆ. ನೀರ ಹೊಳೆಯಲಿ ನಿಂತು ದಾರಿ ನೋಡುತ್ತ ಬಾರದಿರೆ ಮತ್ತೊಮ್ಮೆ ದೂರ ನೋಟ ಬೀರಿ ನಿಲುಕಿ ನೋಡುವ ಜೀವ, ಬಂದವರನ್ನು ಬರುವವರನ್ನು, ನಿಂದವರನ್ನು ನೆರೆದವರನ್ನು ತಮ್ಮವರ ಸುದ್ದಿಯನ್ನು ಕೇಳುತ್ತದೆ. ಪದುಳವೇ ನಮ್ಮವರ ಪದಪದ್ಮ? ಹಾಗಿದ್ದರೆ ಪದಪಿಂದ ನನ್ನನ್ನು ಕರೆದೊಯ್ಯಲೊಲ್ಲರೇಕೆ? ಉದಯಾಸ್ತಮಾನದಲಿ ಕುದಿದು ಕೋಟಲೆಗೊಂಡರೂ ಅವರ ಹೃದಯ ಕರಗದಿದೆಯಲ್ಲ!

**"ಹಿಂದುಳಿಯಿತಮವಾಸ್ಯೆ**
**ಮುಂದೆ ಹುಣ್ಣಿಮೆ ಬಂತು**
**ಎಂದಿಗೇ ಎನ್ನನ್ನು ಕರೆಯಬಹರೋ**
**ನೊಂದು ಸುಯ್ಗರೆಯುವೆನು**
**ಬೆಂದು ಬೆಂಡಾಗುವೆನು**
**ಚಂದವೇ ತಮಗೆನ್ನ ನೋಡದಿಹುದೆ?"**

ತರಗೆಲೆಯು ಗಿರುಕೆಂದರೆ ಹೊರಗೆ ಹೋಗಿ ಆಲಿಸುವ, ಬರದಿದ್ದರೆ ಮನದಲ್ಲಿ ಸುಯ್ಗರೆವ ಹೆಣ್ಣುಜೀವ ಪರರ ಶಿಶುವೆಂದು ನಮ್ಮವರಾದ ಶರಣರೂ

ನನ್ನನ್ನು ಮರೆತುಬಿಟ್ಟರೋ ಎಂದು ಹೆದರುತ್ತಿದೆ. ಪರರಿಗಂತೂ ಇವಳ ಚಿಂತೆ ಅರ್ಥವಾಗದು; ಆದ್ದರಿಂದ ಶರಣರಲ್ಲಿಯೇ ತನ್ನ ಸುಖ-ದುಃಖವನ್ನು ತೋಡಿಕೊಳ್ಳುವ ಅಪೇಕ್ಷೆ ಷಡಕ್ಷರದೇವರ ಸತಿಪತಿ ಭಾವದ ಸುಂದರವಾದ ನಿರೂಪಣೆ ಇಲ್ಲಿದೆ. ಅವರ ಕಾವ್ಯದ ಪ್ರಾಣಶಕ್ತಿಯೇ ಇಲ್ಲಿ ಸ್ಪಂದಿಸುತ್ತಿರುವಂತೆ ನಮಗೆ ಭಾಸವಾಗುತ್ತಿದೆ. ತಮ್ಮ ಮನಸ್ಸೆಂಬ ಮುದ್ದಿನ ಮಗಳಿಗೆ ಹೇಳಿಕೊಳ್ಳುವ ಈ ಬುದ್ಧಿಯ ಮಾತುಗಳನ್ನಿಷ್ಟು ಆಲಿಸೋಣ; ಮಗಳೆ, ನಿನ್ನ ಮನದ ವಲ್ಲಭನು ಎಲ್ಲರಂತವನಲ್ಲ, ಅಂಗವಿದ್ಯೆಗಳನ್ನೆಲ್ಲವನ್ನು ಬಲ್ಲಿದನು. ಒಳಗೊಳಗೆ ಸಲ್ಲಿಸುತ್ತ ಮೆಲ್ಲಗೆ ಎಡೆಯಾಡುತ್ತಿರು; ಹೊರಗೆ ನಿಲ್ಲದಿರು; ಸೂರ್ಯೋದಯದ ಹೊತ್ತಿಗೆ ಮನೆಯ ಕಸವನ್ನು ತೆಗೆದು ಅಣಿಮಾಡಿ ಇಂದ್ರಿಯಗಳ ಅಕ್ಕಿಯನ್ನು ತಳಿಸು. ಮನೆಯಲ್ಲಿ ಕತ್ತಲೆಗೆ ಅವಕಾಶವೀಯಬೇಡ; ಸಿಟ್ಟಿಗೆದ್ದರೆ ನಿನ್ನೊಡೆಯ ರಕ್ಕಸನಂತೆ!

**"ನೀ ಮುಗ್ಧೆ ನಿನ್ನಾಳ್ದ**
**ಕಾಮಾರಿ ಆತ್ಮ ಗಿಳಿ-**
**ರಾಮನನು ಓದಿಸೌ ಹೊರಗಾಡದೆ**
**ನಾ ಮುನ್ನಲಂಜುವೆನು**
**ನೀ ಮಗಳೆ ನಿಜ ಹೇಳು**
**ಸೋಮಧರ ಕೋಪಿಸಿದಡೆಲ್ಲಡಗುವೆ?"**

ಈ ನುಡಿಯಲ್ಲಿ ಅಡಗಿರುವ ಭಾವದ ನವೀನತೆಗೆ ಮಾರುಹೋಗದವರಾರು? ಇರಲಿ; ಮುಂದಿನ ಮಾತಿಗೆ ಕಿವಿಗೊಡೋಣ; ಅವನು ಕೋಪಿಸಿದಾಗ ಕಾಲು ಹಿಡಿದು ಬೇಡಿಕೊಳ್ಳುವೆನೆಂದರೆ ಅವಗೆ ಕಾಲಿಲ್ಲ; ಅಪ್ಪಿಕೊಳ್ಳಬೇಕೆಂದರೆ ಒಡಲಿಲ್ಲ; ಎಳ್ಳಿನಷ್ಟು ಬೇಸರ ಕಂಡರೂ ಅವನು ತಾಳುವವನಲ್ಲ, ಕಟುಶೂಲಿ. ಆದ್ದರಿಂದ ನಿನ್ನ ಮತಿ ಮಸುಳದಿರಲಿ, ಎಚ್ಚರಿಕೆ! ಪತಿವ್ರತೆಯರೊಡನೆ ಗೆಳೆತನ ಮಾಡು. ಪತಿ ಕಾಮಜಿತ, ನೀನೋ ಅತಿಕಾಮಿ. ಆತನನ್ನು ಅಗಲಬೇಡವ್ವ ನಿನ್ನ ಪತಿ ಬಹಳ ಆತುರ ಸ್ವಭಾವದವನು. ಬೇಸರಾಡದಿರು, ದಿವರಾತ್ರಿಗಳೆನ್ನದೆ ಒಡಗೂಡು. ಶುದ್ಧ ಮನಸ್ಸಿನಿಂದ ಭಕ್ತಿಯ ಬೋನವನ್ನು ಮಾಡಿ ಇನಿಯನಿಗೆ ಎಡೆ ಮಾಡು; ಅಂದರೆ ಅವನು ಒಲಿಯುವನು. ಹೀಗೆ ಪತಿಯೊಡನೆ ಹೊಂದಿಕೊಂಡಿದ್ದರೆ ಷಡಕ್ಷರಿ ಲಿಂಗ ಒಲಿದು ನಿನ್ನನ್ನು ತನ್ನಂತೆ ಮಾಡುವನು. ನೀನು ಬೆದರದೆ ನಂಬಿ ನಚ್ಚಿರು.

ಕವಿ ತಮ್ಮ ಆತ್ಮಹಂಸಕ್ಕೆ ಮತ್ತೆ ಹೀಗೆ ನಿವೇದಿಸುತ್ತಾನೆ; ಆಶಾಪಾಶದೊಳಗೆ ನಿಲುಕಿ ಮಾಯಾರೋಷ ಕಿಚ್ಚಿನಲ್ಲಿ ಬೇಯದೆ, ಹೇಡಿ ಪಥವ ನೀನು ಮುಟ್ಟದೆ, ಮೂರು ಬಲೆಯೊಳಗೆ ಸಿಲುಕದೆ 'ಹಾರು ಕಂಡ್ಯ ಹಂಸ ಹಾರು ಕಂಡ್ಯ' ಎಂದು:

"ನಿರಯದ ಸರಸಿಯೊಳಾಡದೆ ನೀನು
ಇರದೆ ಘನದತ್ತ ಹಾರು ಕಂಡ್ಯಾ
ಗಿರಿಯ ಸರಸಿಯೊಳಗೊಪ್ಪುವ ನೀನು
ಉರುತರ ಕ್ಷೀರವ ಸವಿ ಕಂಡ್ಯಾ
ಸಾಸಿರದಳ ಕಮಲದ ಕರ್ಣಿಕೆಯೊಳು ಅಲ್ಲಿ
ಭಾಸುರ ಪ್ರಣಮದ ಪ್ರಭೆಯೊಳು
ಬಾಸವಾಗಿರ್ಪ ಷಡಕ್ಷರ ಮಹಾ-
ಧೀಶನ ನೀ ಹೋಗಿ ನೆರೆ ಕಂಡ್ಯಾ"

ತಾತ್ವಿಕ ದೃಷ್ಟಿಯಿಂದ ಇದರ ವಿವರಣೆ ಏನೇ ಇರಲಿ, ಇಲ್ಲಿ ಒಗುಮಿಗುವ ಭಾವನಿರ್ಭರತೆಯಲ್ಲಿ ಮಿಂದು ಮಡಿಯಾಗದವರಾರು?

ಮುಪ್ಪಿನಾರ್ಯರ ಹಾಡುಗಳಲ್ಲಿ ಹೃದಯಂಗಮ ವರ್ಣನೆ, ವಿಶಾಲ ದರ್ಶನವಿರುವಂತೆಯೇ ನವನವೀನ ಭಾವಗಳ ಆವಿಷ್ಕಾರವಿದೆ. ಅವು ಅತ್ಯಂತ ಮಧುರವಾಗಿ, ನಿರಾಯಾಸವಾಗಿ ಗಿಡದಿಂದ ಹೂ-ಚಿಗುರು ಹೊಮ್ಮುವಂತೆ ಸಹಜವಾಗಿ ಹೊರಹೊಮ್ಮುತ್ತವೆ. ಒಂದೆರಡನ್ನು ಮಾತ್ರ ಇಲ್ಲಿ ಸರಿಗಾಣಿಸಬಹುದು.

"ಎನ್ನ ಕರದೊಳಗಿದ್ದು ಎನ್ನೊಳು ನುಡಿಯನು ಕೇಳು ಸಖಿಯೆ
ತನ್ನ ನಾನು ಏನು ಬೇಡಿದೆನವ್ವ ಕೇಳು ಸಖಿಯೇ"

ಸಾಲೋಕ್ಯ ಮೊದಲ್ಗೊಂಡು ನಾಲ್ಕು ಪದಗಳು ಮೇಲೆ ನಮ್ಮವರ ಬಾಗಿಲ ಕಾದುಕೊಂಡಿವೆ. ನಾನದನ್ನು ಬೇಡಲಿಲ್ಲ. ಅಣಿಮಾದಿ ಅಷ್ಟಸಿದ್ಧಿಗಳನ್ನು ನಮ್ಮವರೆಲ್ಲ ತೃಣಮಾತ್ರ ಲೆಕ್ಕಿಸಿ ಮನದಲ್ಲಿ ಬಗೆಯರು. ಇದು ನನಗೆ ಗೊತ್ತಿಲ್ಲವೇ? ಅವನ್ನು ಬೇಡಿದರಾರು? ಅರವತ್ತುನಾಲ್ಕು ವಿದ್ಯೆಗಳು ನಮ್ಮ ಶರಣರ ಚರಣ ರಕ್ಷೆಗೆ ಸರಿ ಬಾರವು, ಅವನಾರು ಬೇಡಿಯಾರು? ನಮ್ಮ ಪಿಟ್ಟವ್ವೆ ಹೊಟ್ಟೆಗನ್ನವನಿಕ್ಕಿದಳು; ನಮ್ಮ ದಾಸಯ್ಯ ಉಟ್ಟುಕೊಳ್ಳಲು ಬಟ್ಟೆ ಕೊಟ್ಟನು. ಆತ ಬೇಡಿದುದನ್ನೆಲ್ಲ ಶರಣರು ಕೊಟ್ಟರು. ನಾವೇನೂ ಬೇಡದಿದ್ದರೂ ಷಡಕ್ಷರಲಿಂಗ ನಮ್ಮೊಳು ನುಡಿಯನದೇಕವ್ವ ಕೇಳು ಸಖಿಯೇ;

"ಮುನ್ನ ನಮ್ಮ ಶರಣರುಗಳು
ನಿನ್ನ ಕಾಡಿದುದಕೆ ಈಗ
ಎನ್ನ ಮೇಲೆ ಹಗೆಯ ಮಗುಚುತಿಹೆಯೋ ಕಾಣೆನು"

ಎಂಬುದೂ ಇಂಥದೇ ಹೊಸ ಭಾವವನ್ನು ಸೂಚಿಸುತ್ತದೆ. 'ದುಷ್ಟ ನುಡಿಯನು ಬಿಡದೆ, ಒಲಿದು ಮುಟ್ಟಿಕೇಳುವ ಹಾಗೆ ಶಿವನ ಶ್ರೇಷ್ಠವಾದ ಶಾಸ್ತ್ರವನ್ನು ಕೇಳದಿರುವ

ಕಿವಿಯಲ್ಲಿ ಮೊಳೆಯನ್ನಿಟ್ಟು ಕೊಡಲಿಯಿಂದ ತಟ್ಟಿ, ಆಚೆ ಈಚೆಗಾಗುವಷ್ಟು ಬಡಿಯದನಕ ಎನ್ನ ಸಿಟ್ಟು ಹೋಗದು. ಶಿವನನ್ನು ಹಾಡಿ ಹೊಗಳದೆ ಹಗಲಿರುಳು ಕೆಟ್ಟ ಮಾತನ್ನಾಡುವ ನಾಲಿಗೆಯನ್ನು ಸೀಳಿ ಸೀಳಿ ಹೋಳು ಮಾಡಿ ಮೇಲೆ ಸುಣ್ಣದ ನೀರನ್ನೆರೆದು ಮಾಲೆಗಟ್ಟುವವರೆಗೆ ಮನದ ಜ್ವಾಲೆ ಹೋಗದು' ಎಂದವರು ಸಾರಿದ್ದಾರೆ. ಅಂದಿನವರಿಗೆ ಇಂದಿನವರು ಹೊಂದಿ ಹೋಲಲರಿಯರು ಎಂಬ ಕುಂದು ನುಡಿಯನ್ನು ಕಿವಿಯೊಡ್ಡಿ ಕೇಳಲಾಗದು; ಯಾಕೆಂದರೆ ಅಂದಿಗೊಬ್ಬ ಶಿವ, ಇಂದಿಗೊಬ್ಬ ಶಿವ ಉಂಟು ಎಂದು ಎನ್ನಬಹುದೇ?

**"ಘನವ ನಾ ನೆನೆವೆನೆ**
**ಮನ ಹಲವು ನೆನೆಯುತಿದೆ**
**ಮನವ ಹಿಡಿತರುವನಕ ನಿಮಗೆ ಮುನಿಸು;**
**ಮನ ಭೋಗ ಬಯಸುವದು**
**ತನು ಸೊಬಗಿಗೆಳಸುವದು**
**ಘನಮಹಿಮ ನಾ ಮುಂದೆ ಏನಪ್ಪೆನೋ"**

ಹೀಗೆ ಅವರ ಚಿಂತನಾಲಹರಿ ಸ್ವತಂತ್ರವಾದ ರೀತಿಯಲ್ಲಿ ಹರಿದಿದೆ.

**"ಎಲ್ಲಿ ಮೆಚ್ಚು ಎಲ್ಲಿ ಮೋಹ**
**ಎಲ್ಲಿ ಪ್ರೀತಿ ಎಲ್ಲಿ ಪ್ರೇಮ**
**ಅಲ್ಲಿ ಅವರ ವಿಕಳತೆಯಲಿ ಸಾವತೆರನೊಳು**
**ಇಲ್ಲಿ ಷಡಕ್ಷರಿಯ ಲಿಂಗ-**
**ದಲ್ಲಿ ಪ್ರಾಣ ಬಿಡುವ ಹಾಗೆ ಎಂದಿಗಪ್ಪುದೋ"**

ಎಂಬ ಹಂಬಲದಲ್ಲಿ ಅವರ ಆತ್ಮವಿಕಾಸದ ಪರಿಪಕ್ವತೆ ಬಣ್ಣಗೊಂಡಿದೆ.

ಮುಪ್ಪಿನಾರ್ಯರ ಹಾಡುಗಳಲ್ಲಿ ಅನುಭಾವದ ತನಿವೆಳಗು ನಾದ ಮಾಧುರ್ಯದೊಡನೆ ಹದಗೊಂಡ ಶೈಲಿಯಲ್ಲಿ ಒಡಮೂಡಿದೆ. 'ಗಗನ ಗಿರಿಯ ಶಿಖರದ ಮೇಲೆ ಸೊಗಸುವ ರತ್ನಮಂಟಪದಲ್ಲಿ ಝುಗಝುಗಿಸುವ ಶಶಿಸೂರ್ಯ ಪ್ರಭೆಯೊಳಗೆ ಅಗಲದೆ ಬೆಳಗುವ ತೇಜವನ್ನು' ಅವರು ತಮ್ಮ ಗೀತಗಳಲ್ಲಿ ಸೆರೆಹಿಡಿಯಲು ಪ್ರಯತ್ನಿಸಿದ್ದಾರೆ. 'ಶಂಖ, ಕಿನ್ನರಿ, ನಾಗಸರ, ವೀಣೆ, ಝೇಂಕರಿಸುವ ಘಂಟೆ, ಜಾಗಟೆ, ಕಿಂಕಿಣೀ, ಭೇರಿ, ದುಂದುಭಿಯೊಡನೆ ಓಂಕಾರನಾದವಾಗುವುದನ್ನು' ಅವರ ನಾದಲಹರಿ ತೇಲಿಸಿ ತಂದಿದೆ! 'ತೊಳಗುವ ಚಂದ್ರಾರ್ಕ ಮಿಂಚಿನ ಕೋಟಿಯ ಬೆಳಕಿನಿಂದ' ಸಕಲವೂ ಬೆಳಗುತ್ತ ಒಲಿದ ಷಡಕ್ಷರಲಿಂಗವು ಅಲ್ಲಿ ನೆಲೆಸಿರುವುದನ್ನು ತೋರಿಸುವುದೇ ಅವರ ಈ ಹಾಡುಗಳ ಗುರಿಯಾಗಿದೆ.

ಶ್ರೀ ಕಾವ್ಯಾನಂದರು ಇವರ ಹಾಡುಗಳಲ್ಲಿಯ ಕಾವ್ಯದ ಭಾವ-ರಸ-ರುಚಿಯನ್ನು ಕ್ರೋಢೀಕರಿಸಿ ಹೀಗೆ ಹೇಳಿದ್ದಾರೆ : "ಮುಪ್ಪಿನಾರ್ಯರ ಹಾಡುಗಳಲ್ಲಿ ಭಾವವೆಲ್ಲ ಅನುಭಾವ, ರಸವೆಲ್ಲ ಸಮರಸ, ರುಚಿಯೆಲ್ಲ ಶುಚಿ; ಆಧ್ಯಾತ್ಮ ಜೀವಿಯ ಅಂತರಂಗದ ಆಕಾಂಕ್ಷೆಗಳೇ ಹಾಡಿನ ಹೊನಲಾಗಿ ಹರಿದಿರುವ ಮೂಲಕ ಸಾಯುಜ್ಯೋನ್ಮುಖ ರತಿಯ ಮನೋಹರತ್ವವೂ ಅಪರೋಕ್ಷ ಜ್ಞಾನದ ಬೆಳಕೂ, ಸರ್ವಾರ್ಪಣಭಾವದ ಸೌಂದರ್ಯವೂ ವೀರವಿರತಿಯ ಗಾಂಭೀರ್ಯವೂ ಮಧುರ ಭಕ್ತಿಯ ಮನೋಜ್ಞತೆಯೂ, ಹಾಡುಗಳ ತುಂಬೆಲ್ಲ ಸಾಂದ್ರವಾಗಿ ಹರಡಿಕೊಂಡಿವೆ." ಋಷಿಕವಿಗಳ ಮೇಲ್ಮೆಯನ್ನು ಕುರಿತು ೧೯೨೩ ರಲ್ಲಿ ಶ್ರೀ ಬೇಂದ್ರೆಯವರು ವ್ಯಕ್ತಪಡಿಸಿರುವ ಅಭಿಪ್ರಾಯವನ್ನು ಈ ಸಂದರ್ಭದಲ್ಲಿ ನೆನೆಯಬಹುದು; "ನಮಗೆ ಈಗ ಬೇಕಾದವರು ಅಷ್ಟಾದಶವರ್ಣನದ, ಚಕೋರಚಾತಕಗಳ ಸಮಯದ ಕವಿಗಳಲ್ಲ. ಸೃಷ್ಟಿಯ ಪೂಜಾರಿಗಳಾದ, ವಿಚಾರಮೂಢ ವಿಕಾರಗಳನ್ನು ತಾಲಲಯಕ್ಕೆ ಹಾಡುವ ಕವಿಗಳಲ್ಲ. ನಮಗೆ ಬೇಕಾದವರು ಋಷಿಗಳು, ಮಂತ್ರದ್ರಷ್ಟಾರರಾದ ಋಷಿಗಳು. ಮೊದಲು ಭಾವಯೋಗಬಲದಿಂದ ಅಪರೋಕ್ಷ ಜ್ಞಾನವನ್ನೂ ಶೋಕನಿವೃತ್ತಿಯನ್ನೂ ನಿರಂಕುಶವೃತ್ತಿಯನ್ನೂ ಪಡೆದ ಪ್ರಾಸಾದಿಕ ಕವಿಗಳು-ಬೇಕು". ಮುಪ್ಪಿನ ಷಡಕ್ಷರಿ ಇಂಥ ಪ್ರಾಸಾದಿಕ ಕವಿಗಳಲ್ಲಿ ಒಬ್ಬರೆಂದು ಧಾರಾಳವಾಗಿ ಹೇಳಬಹುದು.

ಆಧುನಿಕ ಕನ್ನಡ ಕಾವ್ಯದಲ್ಲಿ ಭಾವಗೀತೆ ಸಮುನ್ನತ ಸ್ಥಿತಿಯಲ್ಲಿರುವ ಕಾವ್ಯ ರೂಪ. ಹಾಡುಗಬ್ಬಗಳ ಪರಂಪರೆಯ ಸಾರವನ್ನು ತಕ್ಕುದಾಗಿ ಹೀರಿಕೊಂಡು ಇದು ಪುಷ್ಟಿಯನ್ನು ಪಡೆದಿರುವುದು ಕಂಡಮಾತಾಗಿದೆ. ಆಧುನಿಕ ಕವಿಗಳಲ್ಲಿ ಕೆಲವರು ತಮ್ಮ ಹಾಡು ಪಾಡುಗಳಲ್ಲಿ ಇಂಥ ಪ್ರತೀತಿಯನ್ನು ತೋರಿಸಿದ್ದಾರೆ. ಈ ಪರಂಪರೆಗೆ ಹೊಸ ಹೊಸ ಕಾಲುವೆ ತೋಡಿ ತಮ್ಮ ಕಬ್ಬದೋಂಟವನ್ನು ಕಂಗೊಳಿಸುವಂತೆ ಮಾಡಿದ್ದಾರೆ. ಕವಿವರ ಬೇಂದ್ರೆಯವರ 'ಕೋಗಿಲೆ' 'ಚೆನ್ನ ಲಿಂಗವೇ' 'ಬೆಳಕಿನ ಲಿಂಗ' 'ಅಪ್ಪಾಯನ' 'ಪಡೆದಪ್ಪನಾಗು' 'ಹರಕೆ' ಮೊದಲಾದ ಸುಂದರ ಕವನಗಳಲ್ಲಿ ಮುಪ್ಪಿನಾರ್ಯರ ಹಾಗೂ ನಿಜಗುಣ ಶಿವಯೋಗಿಗಳ ಪ್ರಾಸಾದಿಕ ವಾಣಿಯ ಸ್ಫೂರ್ತಿಯನ್ನು ಕಾಣಬಹುದು. ಮನದಲ್ಲಿ ಅವರ ನೆನಹು ತುಂಬಿ, ಕಿವಿಯಲ್ಲಿ ಅವರ ಕೀರುತಿ ತುಂಬಿ ಹಾಡಿದ ಈ ಅನುಭಾವ ಗೀತಗಳ ನವೋನವತೆಯನ್ನು ಮನಗಾಣಿಸಲು ಇಲ್ಲಿ ಅವರ ಹೃದಯ ಸಮುದ್ರದಿಂದ ಒಂದು ಪದ್ಯವನ್ನು ಉದಾಹರಿಸಬಹುದು.

**ಬೆಳಕಿನ ಲಿಂಗ**

**ಮಾತಾಡೊ ಮಾತಾಡೊ ಲಿಂಗವೇ । ನೀ**
**ಮಾತಾಡಲೊಲ್ಲೇಕೆ ಲಿಂಗವೇ?**

ಮಾತಿನ ಬಸಿರಲ್ಲಿ ನೆಲೆಗೊಂಡ ಮೌನದಿ
ಹೂತಂಥ ಬೆಳಕಿನ ಲಿಂಗವೇ.

ಗುಡುಗಾಡೊ ಗುಡುಗಾಡೊ ಲಿಂಗವೇ । ನೀ
ಗುಡುಗಾಡಲೊಲ್ಲೇಕೊ ಲಿಂಗವೇ?
ನಡುಹಗಲ ನೆತ್ತಿಯ ಮೋಡದ ಒಡಲಲ್ಲಿ
ಮಿಡುಕುವ ಮಿಂಚಿನ ಲಿಂಗವೇ,

ಉರಿದೇಳೋ ಉರಿದೇಳೊ ಲಿಂಗವೇ । ನೀ
ಉರಿದೇಳಲೊಲ್ಲೇಕೊ ಲಿಂಗವೇ?
ಉರದ ಕತ್ತಲೆಯನ್ನು ಹುರಿದು ಕಿಡಿಕಿಡಿಯಾಗಿ
ಮೆರೆವಂಥ ಬೆಂಕಿಯ ಲಿಂಗವೇ.

ಕೂಡುಬಾ ಕೂಡಬಾ ಲಿಂಗವೇ । ನೀ
ಕೂಡಲು ಒಲ್ಲೇಕೊ ಲಿಂಗವೇ?
ಕೂಡಲದಲ್ಲೊಗೆವ ಮೂಡಲದೊಲವಿನಲಿ
ಮೂಡಿ ಬಾ ಮುತ್ತಿನ ಲಿಂಗವೇ.

ಇಂದಿನ ಕನ್ನಡ ಕಾವ್ಯದಲ್ಲಿ ಹೊಸ ಹೊಸ ಪ್ರಯೋಗಗಳು ನಡೆಯುತ್ತಿರುವದು ಅದರ ಬೆಳವಣಿಗೆಯ ಸಜೀವತೆಯ ಲಕ್ಷಣವಾಗಿದ್ದರೂ ಈ ಹಾಡುಗಬ್ಬದ ಹೊನಲು ಬತ್ತಿಹೋಗಬಹುದೆಂಬ ಶಂಕೆ ಮೂಡುವದೂ ಸಹಜ. ಆದರೆ ಭಾವಸೌಂದರ್ಯವನ್ನು ನಾದಲಹರಿಯಲ್ಲಿ ತೇಲಿಸಿ ತರುವ ಆತ್ಮದ ರಂಗುರೂಪವನ್ನು ನಿರೂಪಿಸುವ ಈ ಗೀತಗಳ ಸಂಪ್ರದಾಯಕ್ಕೆ ಆಗೀಗ ಹೊಸ ಸೆಲೆಯೊಡೆದು ಚೈತನ್ಯ ದೊರಕುವಲ್ಲಿ ಸಂದೇಹವಿಲ್ಲ.

*(ಸಾಹಿತ್ಯ ಚಿಂತನ : ೧೯೬೬)*



೬

❖

# "ವಚನೋದ್ಯಾನ"ದ ವೈಶಿಷ್ಟ್ಯ

ಶ್ರೀ ಸಿದ್ಧಯ್ಯ ಪುರಾಣಿಕರು ಈಗಾಗಲೇ ತಮ್ಮ ನಾಲ್ಕೈದು ಕವನ ಸಂಗ್ರಹಗಳ ಮೂಲಕ ಭಾವಗೀತೆಯ ಪ್ರಕಾರದಲ್ಲಿ ಸಾಕಷ್ಟು ಕೃಷಿಗೈದವರು. ಸೃಷ್ಟಿಯಲ್ಲಿಯ 'ಆನಂದ ನಿಕ್ಷೇಪ'ವನ್ನು ಗುರುತಿಸಿ ಅದರ ಸವಿ ಹಾಗೂ ಛವಿಯ ಸಂದೇಶವನ್ನು ಕಾವ್ಯದ ಮೂಲಕ ಸಾರುತ್ತ ಬಂದವರು. ಮಾನವ ಸಹಜವಾದ ಸ್ನೇಹ, ಕರುಣೆ, ಸಹಕಾರ, ಸಹನೆ ಮೊದಲದ ಗುಣಗಳನ್ನು ಮೈಗೂಡಿಸಿಕೊಂಡ ಮಾನವತೆಯಲ್ಲಿ ಅವರಿಗೆ ಹೆಚ್ಚಿನ ಆಸ್ಥೆ ಹಾಗೂ ನಂಬಿಕೆ. ಕಲ್ಪನೆಯ ನಾವೀನ್ಯ, ಮಾತಿನ ನಿರರ್ಗಳತೆ, ಸದ್‌ಭಾವದ ಆವೇಗ ಅವರ ಕಾವ್ಯದಲ್ಲಿ ಒಡೆದುಕಾಣುವ ಅಂಶಗಳಾಗಿವೆ. 'ಭಾವ ಬುದ್ಧಿಯು ಹಸೆಗೆ ನಿಲ್ಲುವ' ಹಾಗಿರುವ ಯಶಸ್ವಿ ಕವನಗಳನ್ನೂ ನೀಡಿದ್ದಾರೆ. ಮೊದ ಮೊದಲು ಅಂಶತಃ ಕಾಣಿಸುತ್ತಿದ್ದ ಸಾಮಾಜಿಕ ಪ್ರಜ್ಞೆ ಬರಬರುತ್ತ ಅವರ ಅನಿರ್ಬಂಧವಾದ ಅಭಿವ್ಯಕ್ತಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆಯುತ್ತ ಬಂದಿರುವುದನ್ನು ಕಾಣಬಹುದು. ಅವರ ಕಾವ್ಯ ರಚನೆಯಲ್ಲಿ ಬೇಂದ್ರೆಯವರು ಈ ಮೊದಲೇ ಗುರುತಿಸಿದ "ಭಾವನೆಯ ವಾಯುವೇಗ, ಬುದ್ಧಿಯ ಅಗ್ನಿಗುಣ ಹಾಗೂ ತತ್ವಗಳ ತೂಕ" ಇವುಗಳಿಗೆ ತಕ್ಕ ಅಭಿವ್ಯಕ್ತಿ ಮಾಧ್ಯಮವನ್ನು ಸಿದ್ಧಯ್ಯನವರು ವಚನ ರೂಪದಲ್ಲಿ ಕಂಡುಕೊಂಡದ್ದು ಕನ್ನಡದ ಸುದೈವವೆಂದು ಹೇಳಬಹುದು. ಕಾವ್ಯ ಪ್ರಯೋಗದಲ್ಲಿ ಅವರು ಇದುವರೆಗೆ ಅನುಭವಿಸಿದ ಅರಕೆಗಳೆಲ್ಲವನ್ನೂ 'ವಚನೋದ್ಯಾನ'ದ ೫೨೫ ವಚನಗಳಲ್ಲಿ ತುಂಬಿಕೊಡಲು ಪ್ರಯತ್ನಿಸಿ ಯಶಸ್ವಿಯಾಗಿರುವುದಲ್ಲದೆ ವಚನ ಪ್ರಕಾರದ ಹೊಸ ಸಾಧ್ಯತೆಗಳನ್ನು ತೋರಿಸಿ ಕೊಡುವಲ್ಲಿಯೂ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಶಿವಶರಣರ ವಚನ ಸಾಹಿತ್ಯ ನಂತರದ ಕವಿಗಳ ಮೇಲೆ ತನ್ನ ಪ್ರಭಾವವನ್ನು ಒಂದಲ್ಲ ಒಂದು ರೀತಿಯಲ್ಲಿ ಬೀರುತ್ತಲೇ ಬಂದಿರುವುದು ನಿಜವಾದರೂ ಅದು ಮೂಲಪ್ರಕಾರದಲ್ಲಿಯೇ ಹೊಸಗನ್ನಡದಲ್ಲಿ ಒಂದು ಅಭಿವ್ಯಕ್ತಿಯ ಕ್ರಮವಾಗಿ ಮತ್ತೆ ರೂಪುಗೊಂಡಿರುವುದು ಗಮನಾರ್ಹವಾಗಿದೆ. ಸಮಕಾಲೀನ ಸಂವೇದನಗಳಿಂದ ತೂಗಿಸಿಕೊಂಡು, ಹೊಸ ಕಾಲದ ಭಾವಸೂಕ್ಷ್ಮಗಳನ್ನು ಒಳಗೊಂಡು, ಆಯಾ ಲೇಖಕರ ಕೈಗುಣ, ಮೈಗುಣಕ್ಕೆ ತಕ್ಕಂತೆ ವಚನ ರಚನೆಯ ವಿಧಾನ ಹೊಸ ಹೊಸ ವಿನ್ಯಾಸವನ್ನು ಪಡೆಯುತ್ತಿರುವುದನ್ನು ಇಂದು ಕಾಣುತ್ತಿದ್ದೇವೆ. ಹೀಗೆ ವಚನರೂಪವನ್ನು ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳಿಂದ ಇಂದಿನ ನಮ್ಮ ಎಲ್ಲ ಬಗೆಯ ಅನುಭವಗಳಿಗೆ ಒಡ್ಡಿ, ಒಡಮುರಿದೇಳುವಂತೆ ಮಾಡಿದ ನಾಲ್ಕೈದು ಜನ ಪ್ರಮುಖರಲ್ಲಿ ಸಿದ್ಧಯ್ಯನವರ ಸಾಧನೆ ಎದ್ದು ಕಾಣುವಂತಹದು. ಬದುಕಿನ ನೇರ ಸಂಪರ್ಕದೊಂದಿಗೆ ಪರಿಸರಕ್ಕೆ ತೋರುವ ಪ್ರಕ್ರಿಯೆಯಲ್ಲಿ, ಹೃದಯದ ಆಳದಿಂದ ಹೊರಹೊಮ್ಮುವ ನಿವೇದನದಲ್ಲಿ, ವಿಜ್ಞಾನವನ್ನೂ, ತತ್ವಜ್ಞಾನವನ್ನು ಕವಿಹೃದಯದೊಂದಿಗೆ ಕಸಿಗೊಳಿಸಿ, ಅನುಭಾವದ ಹೊಳಹು ಹಾಕುವಲ್ಲಿ, ಯಾವ ಗಡಿ–ನುಡಿಯೂ ಅಡ್ಡಿ ತಾರದ ಮುಕ್ತ ಮಾನಸದಲ್ಲಿ, ಲೋಕದ ಆಗುಹೋಗುಗಳ ವಿಮರ್ಶೆಯಲ್ಲಿ, ಆತ್ಮನಿರೀಕ್ಷೆಯಲ್ಲಿ, ತಾವು ನಂಬಿ ತಮ್ಮದನ್ನಾಗಿಸಿಕೊಂಡುದರ ಗಟ್ಟಿತನದಲ್ಲಿ ಮತ್ತು ಅದರ ಚಿಂತನಲಹರಿಯಲ್ಲಿ ಹಾಗೂ ನುಡಿಯ ಬೆಡಗನ್ನು ಅರ್ಥವತ್ತಾಗಿ ಮೂಡಿಸುವಲ್ಲಿ ಸಿದ್ಧಯ್ಯನವರು ತಮ್ಮ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ಶರಣರ ವಚನಗಳ ಸಾರಸತ್ವವನ್ನು ತಣಿಹೀರಿ ಹೊಸ ಕಾಲದ ಬಣ್ಣ ಬೆಡಗುಗಳಿಂದ 'ವಚನೋದ್ಯಾನ'ದ ಹೂವುಗಳಿಗೆ ಹೊಸ ಕಳೆ ಬಂದಿದೆ. ಕೆಲವೇ ಉದಾಹರಣೆಗಳಿಂದ ಅದನ್ನು ಮನಗಾಣಿಸಿಕೊಡುವುದು ಈ ಚಿಕ್ಕ ಲೇಖನದ ಉದ್ದೇಶವಾಗಿದೆ.

ಅನೇಕ ವಾದಗಳು ತಾಂಡವವಾಡುತ್ತಿರುವ, ಹಲವಾರು ಬೋಧೆಗಳು ಬೀದಿಗಿಳಿದಿರುವ ಕಾಲ ಇದು. ಇವುಗಳ ಮಧ್ಯದಲ್ಲಿ ತನ್ನ ಹಾದಿಯನ್ನು ಕಂಡುಕೊಳ್ಳುತ್ತ, ತನ್ನತನವನ್ನು ಕಾಪಾಡಿಕೊಳ್ಳುವುದು ಅತ್ಯಂತ ಕಷ್ಟದ ಕೆಲಸ. ಈ ಸಂದರ್ಭದಲ್ಲಿ :

**ಆ ಹಾದಿ ಈ ಹಾದಿಯೆಂದು**
**ಬಿತ್ತಲು ಭೂಮಿಯೇ ಉಳಿಯದಂತಾದರೆ ಹೇಗಯ್ಯ?**
**ಆ ಬೀದಿ ಈ ಬೀದಿಯೆಂದು**
**ಮನೆ ಕಟ್ಟಲು ಸ್ಥಳವೇ ಉಳಿಯದಂತಾದರೆ ಹೇಗಯ್ಯ?**
**ಆ ವಾದ ಈ ವಾದವೆಂದು**
**ಮನೆಮಾತಿಗೇ ವೇಳೆ ಉಳಿಯದಂತಾದರೆ ಹೇಗಯ್ಯ?**

**ಆ ಬೋಧೆ ಈ ಬೋಧೆಯೆಂದು**
**ತಿಳಿದಷ್ಟೂ ತಿಳಿಗೆಡುತ್ತ ಹೋದರೆ ಹೇಗಯ್ಯ?**

ಎಂದು ಇವರ ಮನಸ್ಸು 'ಸ್ವತಂತ್ರ ಧೀರ ಸಿದ್ಧೇಶ್ವರ'ನಲ್ಲಿ ಕಳಕಳಿಯಿಂದ ಕೇಳುತ್ತದೆ. ಈ ಪ್ರಶ್ನೆಯಲ್ಲಿಯ ಮಾತಿನ ಧಾಟಿ ಎಷ್ಟೊಂದು ಶಕ್ತಿಯುತವಾಗಿದೆಯೆಂದರೆ ಹಾಗೆ ಮಾಡುವುದು ತಕ್ಕ ರೀತಿಯಲ್ಲ ಎಂಬುದನ್ನು ಅದರ ಧ್ವನಿಯೇ ನಿರೂಪಿಸುತ್ತದೆ. ಹಾಗೆಯೆ ಬಿತ್ತಲು ಭೂಮಿ, ಮನೆ ಕಟ್ಟಲು ಸ್ಥಳ, ಮನೆಮಾತಿಗೆ ವೇಳೆ –ಇವು ಸ್ವತಂತ್ರವಾದ ಅಸ್ತಿತ್ವವನ್ನು ಎತ್ತಿ ಹೇಳುವ ಪದಗಳಾಗಿ ನಿಂತು ಮೇಲಿನ ಮಾತನ್ನು ಸಮರ್ಥಿಸುತ್ತದೆ.

ಈ ಸಂಬೋಧನೆ ಮುಂದೆ ಬಿನ್ನಹಕ್ಕೆ ತಿರುಗುತ್ತದೆ:

**ದಿನಕ್ಕೊಂದು ಮಡಿಯಲ್ಲಿ ನೆಡಬೇಡವಯ್ಯ**
**ನಿನ್ನ ಈ ಬಡ ಸಸಿಯನ್ನು;**
**ದಿನಕ್ಕೊಬ್ಬರ ಕೈಗೆ ಕೊಡಬೇಡವಯ್ಯ**
**ನಿನ್ನ ಈ ಬಡ ಸಿಸುವನ್ನು**

ಬಡ ಸಸಿ, ಹಾಗೂ ಬಡ ಸಿಸುವಿನ ಪ್ರತಿಮೆಗಳ ಔಚಿತ್ಯವನ್ನು ಇಲ್ಲಿ ಪರಿಭಾವಿಸಬೇಕು. ಅವಿನ್ನೂ ಬೆಳೆದು ಬಲಗೊಂಡು ತಮ್ಮ ಅಸ್ತಿತ್ವವನ್ನು ಮೆರೆಯಬೇಕಾದವುಗಳು. ಅಂಥವನ್ನು ದಿನಕ್ಕೊಂದು ಮಡಿಯಲ್ಲಿ ನೆಡುವುದರಿಂದ, ದಿನಕ್ಕೊಬ್ಬರ ಕೈಗೆ ಕೊಡುವುದರಿಂದ ಅದು ಹೇಗೆ ಸಾಧ್ಯವಾದೀತು? ವಚನ ಕೊನೆಗೊಳ್ಳುವದು ಅಂತಃಕರಣದ ಆದೇಶದಿಂದ:

**ನಿನ್ನ ಹಾದಿಯಲ್ಲಿ ನಡೆಸು**
**ನಿನ್ನ ಬೋಧೆಯನ್ನು ಕುಡಿಸು**
**ನನ್ನಿಯೊಂದನೆ ನುಡಿಸು.**

ಹೀಗೆ ತನ್ನದೇ ಆದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಹಂಬಲ ಸಂಬೋಧನೆ, ಬಿನ್ನಹ, ಆದೇಶಗಳ ತಿರುವಿನೊಂದಿಗೆ ಅದಕ್ಕೆ ತಕ್ಕ ಆಕಾರವನ್ನೂ ಈ ವಚನ ತಾನಾಗಿಯೇ ಪಡೆದುಕೊಂಡಿದೆ. ಈ ಬಗೆಯ ರಚನಾ ವಿಧಾನವು ಆಯಾ ಅನಿಸಿಕೆ, ಆಲೋಚನೆ, ಅನುಭವಗಳ ಅಭಿವ್ಯಕ್ತಿಗೆ ತಕ್ಕಂತೆ ರೂಪುಗೊಂಡಿರುವುದನ್ನು ಇಲ್ಲಿಯ ಅನೇಕ ವಚನಗಳಲ್ಲಿ ಕಾಣಬಹುದು.

ಬರಿಯ ಅರಿವಿನಿಂದೇನು ಪ್ರಯೋಜನ? ಅದು ತನ್ನ ಅನುಭಾವವನ್ನು ಆಶ್ರಯಿಸಿ ನೆಲೆಗೊಂಡಾಗ ಮಾತ್ರ ನಿಜದ ಅರಿವಾಗಬಲ್ಲದಷ್ಟೆ? ಶರಣರ ನಿಲುವನ್ನೇ

ಈ ವಚನಕಾರರೂ ತಾಳಿದ್ದರೂ ಅದನ್ನು ಸ್ವಾನುಭವದ ಎರಕದಲ್ಲಿ ಹೀಗೆ ಮೂಡಿಸುತ್ತಾರೆ;

ನೆಲದಲ್ಲಿ ಹೋಗದ ನೇಗಿಲಿಗೆ ಬೆಲೆ ಎಲ್ಲಿ?
ಅನುಭಾವವನ್ನು ಆಶ್ರಯಿಸದ ಅರಿವಿಗೆ ನೆಲೆ ಎಲ್ಲಿ?
ಕಲ್ಲಿನಲ್ಲಿ ಕಂಡರಸಿದ ಒರತೆಗೆ ಸೆಲೆ ಎಲ್ಲಿ?
ಹೊಲೆಯಲ್ಲಿ ಹುಟ್ಟಿದ ಜೀವಿಗೆ ಹೊಲೆ ಎಲ್ಲಿ?
ಆಕಾಶದ ಕೊಪ್ಪರಿಗೆಗೆ ಒಲೆ ಎಲ್ಲಿ?
ಬಯಲ ಮತ್ಸ್ಯವ ಹಿಡಿಯೆ ಬಲೆ ಎಲ್ಲಿ?

ಸ್ವತಂತ್ರ ಧೀರ ಸಿದ್ಧೇಶ್ವರಾ,
ನಿನ್ನ ನಿರಾಕರಿಸಿ, ನಾನಿರಬಲ್ಲೆನೆಂದರೆ ಕಡಲ ಬಿಟ್ಟು ಅಲೆ ಎಲ್ಲಿ?

ಒಂದು ಪದ ಹೆಚ್ಚು ಒಂದು ಪದ ಕಡಿಮೆಯಾಗದಂತೆ ಪ್ರಾಸಾನುಪ್ರಾಸಕ್ಕೆ ಭಾಷೆಯನ್ನು ಹದವಾಗಿ ಬಳಸಿಕೊಂಡು, ಒಂದೊಂದು ವಾಕ್ಯದಲ್ಲಿಯೂ ಮಾತಿನ ತೂಕವನ್ನು ಕಾಯ್ದುಕೊಂಡಿರುವುದು ಇಂಥ ವಚನಗಳಲ್ಲಿ ಕಣ್ಣಿಗೆ ಕಟ್ಟುತ್ತದೆ. ಕಿವಿಗೂ ತಟ್ಟುತ್ತದೆ.

ಇಲ್ಲಿಯ ವಚನಗಳಿಗೆ ಕವಿಹೃದಯವೇ ಪ್ರಧಾನವಾಗಿದ್ದು, ದೈವೀ ಶ್ರದ್ಧೆ ಹಾಗೂ ಜೀವನಶ್ರದ್ಧೆ ಎರಡೂ ಅದಕ್ಕೆ ತಳಹದಿಯಾಗಿದೆ. 'ಬಾಳಿನ ಬಾನಿನಲ್ಲಿ ಬುದ್ಧಿಯೇ ಭಾನು, ಶ್ರದ್ಧೆಯೇ ಶಶಿಯಾಗಲಯ್ಯಾ' ಎಂದು ಆಶಿಸಿರುವ ಈ ವಚನಕಾರರ ಕೋರಿಕೆ ಧ್ವನಿಪೂರ್ಣವಾಗಿದೆ. ಆಧುನಿಕ ಕಾಲದ ವೈಚಾರಿಕ ನಿಲುವು ಅಳವಡಿಸಿಕೊಳ್ಳಬೇಕಾದ ಜೀವನದ ಮೌಲ್ಯಗಳು ಶ್ರದ್ಧೆಯ ತಂಬೆಳಕಿನಲ್ಲಿಯೇ ಪ್ರತಿಫಲಿಸಿವೆ. ಅರ್ಥ–ಅನುಭವಗಳ ಸಮರಸವನ್ನೂ ಹೊಳೆವು–ತಿಳಿವುಗಳ ಪರಿಣಾಮವನ್ನೂ ಸಾಧಿಸುವುದೇ ಇವರ ಧ್ಯೇಯವಾಗಿರುವುದರಿಂದ ಪ್ರತಿಯೊಂದು ವಸ್ತುವಿನ ನಿರ್ವಹಣೆಯಲ್ಲಿಯೂ ಅದು ಎದ್ದು ಕಾಣುತ್ತದೆ. ಹಾಗೆಯೇ 'ಉಳ್ಳವರಿಗೆ ಎಲ್ಲವೂ ಉಂಟು. ಇಲ್ಲದವರಿಗೆ ಮಾತ್ರ ನೀನೊಬ್ಬನೆ ಅಯ್ಯ! ಇಲ್ಲದವರಿಗೆ ಕೈ ಬಿಡದಿರಯ್ಯ' ಎಂಬ ಪ್ರಾರ್ಥನೆ ಆಧುನಿಕ ಸಂದರ್ಭದಲ್ಲಿ ಇನ್ನಿಷ್ಟು ಅರ್ಥಪೂರ್ಣವಾಗಿದೆ.

ಜೀವನದ ಆಳವಾದ ಅರಿವು–ಅನುಭವ, ಅದರ ವಿವೇಚನೆ–ವಿಮರ್ಶೆ ಹಲವಾರು ವಚನಗಳ ಬಂಧದಲ್ಲಿ ಬಿಗಿವಡೆದಿವೆ;

ದಿನ ದಿನ ಗುಡಿಸಿಯೂ ದಿನ ದಿನ ಕಸ
ಈ ಮನೆಯಲ್ಲಿ;
ದಿನ ದಿನ ಉಣಿಸಿಯೂ ದಿನ ದಿನ ಹಸಿವೆ
ಈ ತನುವಿನಲ್ಲಿ;
ದಿನ ದಿನ ಹಿಗ್ಗು, ದಿನ ದಿನ ಕುಗ್ಗು
ಈ ಮನದಲ್ಲಿ.

ಈ 'ಅಂತವಿಲ್ಲದ ವಿರೋಧಾಭಾಸದ ಕೊನೆಯಿಲ್ಲದ ಕಣ್ಣುಮುಚ್ಚಾಲೆಯ ಪರಮ ರಹಸ್ಯವೇನು?' ಎಂದು ಒಮ್ಮೆ ಚಿಂತಿಸಿದರೆ;

ಬಿತ್ತುವಾಗೊಂದು ಹಿಗ್ಗು,
ಬೆಳೆಯುವಾಗೊಂದು ಹಿಗ್ಗು,
ಬೆಳೆಯ ಕಾಯುವಾಗೊಂದು ಹಿಗ್ಗು,
ಬೆಳೆಯ ಕುಯ್ಯುವಾಗೊಂದು ಹಿಗ್ಗು,
ರಾಶಿಮಾಡುವಾಗೊಂದು ಹಿಗ್ಗು,
ಆಯ ಕೊಡುವಾಗೊಂದು ಹಿಗ್ಗು,
ಉಳಿದುದ ಉಣುವಾಗೊಂದು ಹಿಗ್ಗು!

ಹೀಗೆ ತಿಳಿದವರು ಹಿಗ್ಗಿಸಿದಷ್ಟೂ ದರ್ಶನವನ್ನು, ಬಿತ್ತಿ ಬೆಳೆದುಣ್ಣುವ ಒಂದು ಕ್ರಿಯೆಯ ಬೆಳವಣಿಗೆಯ ಸುಗ್ಗಿಯ ವಿವಿಧ ಹಂತಗಳ ಪ್ರತಿಮೆಯ ಮೂಲಕ ಸಹಜವಾಗಿ ಮೂಡಿಸಲಾಗಿದೆ. ಒಂದು ಮಾತನ್ನು ಗಟ್ಟಿಗೊಳಿಸಲು ಒಮ್ಮೊಮ್ಮೆ ಒಂದಕ್ಕೆ ಹತ್ತು ಉದಾಹರಣೆಗಳು ಸಾಲಾಗಿ ನಿಲ್ಲುವುದುಂಟು. ಅಂಥಲ್ಲಿ ಹೂವು ಬೇರೆಯಾದರೂ ಒಂದೇ ಮಾಲೆಯಲ್ಲಿ ಅಳವಟ್ಟು ಅದರ ಸೊಬಗನ್ನು ಹೆಚ್ಚಿಸುವ ತವಕವನ್ನು ಕಾಣುತ್ತೇವೆ. ಬಾಳಿನ ಸಾರ್ಥಕತೆಯಿರುವುದು ಬುದ್ಧಿ ಹಾಗೂ ಭಾವನೆ ಎರಡರ ಬಲದಿಂದಲೇ ಎಂಬುದನ್ನು ಪ್ರಶ್ನೆಗಳ ಮೂಲಕವೆ ನಿರೂಪಿಸುವ ಶಕ್ತಿ ಅವರ ದೃಷ್ಟಾಂತಗಳಿಗಿವೆ:

ಹಕ್ಕಿಯ ಹಾರಾಟ
ಪಕ್ಕದ ಬಲದಿಂದಲೊ ಪ್ರಾಣದ ಬಲದಿಂದಲೊ?
ಬೀಜದ ಮೊಳೆತ
ಭೂಮಿಯ ಬಲದಿಂದಲೊ ನೀರಿನ ಬಲದಿಂದಲೊ?
ನೋಡುವವನ ನೋಟ
ಕಣ್ಣಿನ ಬಲದಿಂದಲೊ ಬೆಳಕಿನ ಬಲದಿಂದಲೊ?

ಬಾಳಿನ ಸಾರ್ಥಕತೆ
ಬುದ್ಧಿಯ ಬಲದಿಂದಲೊ ಭಾವನೆಯ ಬಲದಿಂದಲೊ?
ಎರಡರ ಬಲದಿಂದವೆಂದಾತ
ನಮ್ಮ ಸ್ವತಂತ್ರಧೀರ ಸಿದ್ಧೇಶ್ವರ!

ಒಂದೊಂದು ಭಾವ, ಆಲೋಚನೆಗಳೂ ಸಮರ್ಥವಾದ ನೂತನ ರೂಪಕಗಳಲ್ಲಿಯೇ ಮೈದಾಳಿ ತಮ್ಮ ನಿಲವನ್ನು ಪರಿಣಾಮಕಾರಿಯಾಗಿ ಅರಳಿಸಿರುವುದನ್ನು 'ವಚನೋದ್ಯಾನ'ದಲ್ಲಿ ಕಣ್ಣಿಟ್ಟ ಕಡೆಯಲ್ಲೆಲ್ಲ ಕಾಣಬಹುದು;

ಹಾಳಾದ ಬಾಳಿನ ಹಾಳು ಮಣ್ಣಿನಲ್ಲಿಯೇ
ಹಣ್ಣಾಗದ ಹಾರೈಕೆಗಳ ಗೊರಟಗಳನ್ನೂರಿ
ಕೃತಕೃತ್ಯತೆಯ ಕೈತೋಟವನ್ನು ಬೆಳೆಸುವೆನಯ್ಯ।
ನನ್ನ ನೋವಿನ ಕೆನೆಯನ್ನು
ನಿನ್ನ ನಾಮದ ಮಂಥಾನದಿಂದ ಕಡೆದು
ನಲವಿನ ನವನೀತವ ಪಡೆವೆನಯ್ಯಾ!

ಹಾಜರಿ ಹಾಕುತ್ತಲೇ ಓಡಿ ಹೋಗುವ ಬಾಲಕನಂತೆ ನಲವು।
ಹಾಜರಿದ್ದು ಕಲಿಯುವ ಬಾಲಕನಂತೆ ನೋವು।
ಜೀವನದ ಪಾಠಶಾಲೆಯಲ್ಲಿ.

ನಿನ್ನ ಉದ್ದರಿ ಖಾತೆಯಲ್ಲಿ ನನ್ನ ಹೆಸರೇ ಮೊದಲ ಪುಟದಲ್ಲಿ।
ಉಳಿದವರು ಅಷ್ಟಿಷ್ಟು ಬಾಕಿ ಮುಟ್ಟಿಸಿದರೂ
ನಾನು ಒಂದು ಪೈಸೆಯನ್ನೂ ಪಾವತಿ ಮಾಡಿಲ್ಲವಯ್ಯಾ।

ಕಲಿತ ವಿದ್ಯೆ, ದೊರೆತ ಕೆಲಸಗಳ
ನಡುವಣ ವಿರಸ ದಾಂಪತ್ಯವೇ
ಇರವಿನ ಉರುಟುತನಕ್ಕೆ ಸೆಳೆಯಾಗಿಹುದಯ್ಯ.

ಜೀವನದ ಆಳದಲ್ಲಿರುವ ನೋವು ಹಾಗೂ ಬದುಕಿಗೆ ಅದರಿಂದ ಒದಗಿರುವ ಬೆಲೆಯನ್ನು ಅನುಭವದ ಪಕ್ವತೆಯಿಂದ ಭಾವಕ್ಕೆ ತಕ್ಕ ಭಾಷೆಯಲ್ಲಿ ಹಿಡಿದಿಡುವ, ಕಡೆದಿಡುವ ರೀತಿಯನ್ನು ಗಮನಿಸಿ–

ಇನ್ನೇನೋ ಇಲ್ಲದೆ ಬದುಕಬಲ್ಲೆ,
ನೋವಿಲ್ಲದೆ ಬದುಕಲಾರೆನಯ್ಯಾ;
ಕೂರ್ಪರನಗಲಿದ ನೋವು, ಗುರಿಯ ಮುಟ್ಟದ ನೋವು,
ಆಸೆ ಅರಳದ ನೋವು, ಒಲವು ಫಲಿಸದ ನೋವು,
ನಿನ್ನನರಿಯದ ನೋವು, ನನ್ನ ಮರೆಯದ ನೋವು
ಒಂದೊಂದೂ ಊಟೆಯಯ್ಯಾ ಜೀವನದ ಝರಿಗೆ;
ಬಾಳು ಎಚ್ಚರಗೊಳ್ಳುವುದಯ್ಯ ನೋವಿನ ಕರೆಗೆ;
ನೋವೆ ನಾವೆಯಯ್ಯ ಬದುಕಿನ ತೊರೆಗೆ;
ನೋವಿನ ಹೂವಿನ ಮಧುವಿಗೆ
ಮಧುಕರನಾಗುವ ಭಾಗ್ಯವ ಕರುಣಿಸಯ್ಯಾ
ಸ್ವತಂತ್ರಧೀರ ಸಿದ್ಧೇಶ್ವರಾ.

"ನೋವಿಲ್ಲದೆ ಬದುಕಲಾರೆ' ಎಂದು ಪ್ರಾರಂಭದಲ್ಲಿಯೇ ವಿಚಿತ್ರವೆಂದು ತೋರುವ ಭಾವ ಮುಂದಿನ ಮೂರು ಸಾಲುಗಳಲ್ಲಿ ಬದುಕಿನ ಒಳಪದರುಗಳನ್ನು ಮಡಿಕೆ ಕೆಡದಂತೆ ಮೆಲ್ಲಗೆ ಎತ್ತಿ ತೋರಿಸಿ, ಮತ್ತೆ ಮುಂದಿನ ಮೂರು ಸಾಲುಗಳಲ್ಲಿ ಜೀವನವನ್ನು ಸರಿಯಾಗಿ ಅರ್ಥ ಮಾಡಿಕೊಂಡಿರುವ ಬಗೆಯನ್ನು ದೃಢವಾಗಿ ನಿರೂಪಿಸಿ, ಕೊನೆಯ ಸಾಲುಗಳಲ್ಲಿ ನೋವಿನ ಹೂವಿಗೆ ಮಧುಕರನಾಗುವ ಕೋರಿಕೆಯಿಂದ ಮೇಲಿನ ಭಾವ ದೇವಾಲಯಕ್ಕೆ ಕಳಸವಿಟ್ಟಂತೆ ಮುಕ್ತಾಯಗೊಳ್ಳುತ್ತದೆ. ರಚನೆಯ ದೃಷ್ಟಿಯಿಂದಲೂ ಕಡೆದ ಬುಗುರಿಯಂತೆ ಈ ವಚನ ಸ್ವಯಂಪೂರ್ಣವಾಗಿ ಕಂಗೊಳಿಸುತ್ತದೆ.

ವಚನಕಪ್ರಕಾರವನ್ನು ಹೊಸ ಸಾಧ್ಯತೆಗಳಿಗೂ ಅವಕಾಶ ಮಾಡಿಕೊಂಡವರಲ್ಲಿ ಶ್ರೀ ಸಿದ್ಧಯ್ಯನವರೂ ಒಬ್ಬರು ಹಾಗೂ ಗಣ್ಯರು. ಸಮಕಾಲೀನ ಸಂವೇದನೆಯಿಂದೊಡಗೂಡಿದ ಭಾವಾಲೋಚನೆಗಳಲ್ಲಿ ಇದು ಒಡೆದು ಕಾಣುತ್ತದೆ. ಧಾರ್ಮಿಕ ಆಡಂಬರದ ಮೂಲಕ ಭ್ರಷ್ಟಾಚಾರವನ್ನು ಮುಚ್ಚಲೆತ್ನಿಸುವ ಕಳ್ಳಭಕ್ತರ ಕದೀಮತನವನ್ನು ಚಿತ್ರಿಸುವ ಸಂದರ್ಭವನ್ನು ನೋಡಬಹುದು;

ಲಂಚದ ಹಣದಿಂದ ಪಂಚಾಮೃತವ ತರುವರಾರೋ,
ಕಾಳಸಂತೆಯ ಹಣದಿಂದ ಪಲ್ಲಕ್ಕಿ ಕೊಡಿಸುವರಾರೋ,
ಖೊಟ್ಟಿ ಪರ್ಮಿಟ್ಟಿನ ಹಣದಿಂದ ಗೋಪುರವ ಕಟ್ಟಿಸುವರಾರೋ
ಕಂಟ್ರೋಲಿನ ಕಾಂಚಾಣದಿಂದ ಕಳಸವಿಡುವರಾರೋ
ಈ ಕದ್ದುಣ್ಣುವ ಕದೀಮರ ಕಳ್ಳಭಕ್ತಿಯ ಕಂಡು

**ಕದ್ದು ನಗುತ್ತಿರುವಿಯೇನಯ್ಯಾ?**
**ನಕ್ಕರೆ ಸಾಲದು, ಇಕ್ಕಯ್ಯಾ ಅವರನ್ನು ಇಕ್ಕುಳದೊಳಗೆ**
**ಸ್ವತಂತ್ರಧೀರ ಸಿದ್ಧೇಶ್ವರಾ.**

ಕವಿ ಹೀಗೆ ಜನತೆಯ ನಾಲಗೆಯಾಗುತ್ತಾನೆ, ಅವರ ಸಂಕಟಕ್ಕೆ ಸಾಕ್ಷಿಯಾಗುತ್ತಾನೆ ಎಂಬುದಕ್ಕೆ ಕೊನೆಯ ಸಾಲು ನಿಷ್ಠುರವಾದ ನಿದರ್ಶನ. ಕಂಪ್ಯೂಟರ್ ಮಾನವ ಹಾಗೂ ಕೃತ್ರಿಮ ಜೀನ್ಸ್ ಮಾನವ ನಿರ್ಮಾಣಗೊಂಡು ದೇವನಿರ್ಮಿತ ಮಾನವರಿಗೆ ಸವಾಲು ತೋರಿ ನಿಂತಿರುವುದನ್ನು ಕಂಡಾಗ–

**ಸಂಕರಧಾನ್ಯ, ಸಂಕರಪುಷ್ಪ, ಸಂಕರ ಫಲಗಳು ಬಂದಿವೆ.**
**ಸಂಕರ ತಳಿಯೂ ಬರಲಿದೆಯೇನಯ್ಯಾ?**
**ಬಂದರೆ ಅದರ ಇತಿಮಿತಿಗಳೇನಯ್ಯಾ?**

ಎಂಬ ಆತಂಕ ಸಹಜವೇ ಆಗಿದೆ. 'ನಿನ್ನನುಳಿದ ಮತಿಯ ಪ್ರಗತಿ ಪ್ರಚ್ಛನ್ನ ದುರ್ಗತಿಯೇನಯ್ಯಾ?' ಎಂಬ ಎಚ್ಚರಿಕೆ ಇಲ್ಲಿ ಗಮನಾರ್ಹವಾಗಿದೆ.

ಸ್ವತಂತ್ರ ಧೀರ ಸಿದ್ಧೇಶ್ವರನ ಆರಾಧಕನಾದ ಈ ಕವಿಯ ವ್ಯಕ್ತಿತ್ವ ಎಂಥದು? ಕಾಲಪ್ರವಾಹದ ಜೊತೆಗೆ ತೇಲಿ ಹೋಗುವಂಥದಲ್ಲ ಅದು–

**ಗತಕಾಲವೆ, ನಿನ್ನನ್ನು ಪ್ರೀತಿಸಬಲ್ಲೆ–ಪೂಜಿಸಲಾರೆ ನಾನು;**
**ವರ್ತಮಾನವೆ, ನಿನ್ನನ್ನು ಆದರಿಸಬಲ್ಲೆ–ಅರ್ಚಿಸಲಾರೆ ನಾನು;**
**ಭವಿಷ್ಯತ್ತೆ, ನಿನ್ನನ್ನು ಸ್ವಾಗತಿಸಬಲ್ಲೆ–ಸಮಾರಾಧಿಸೆ ನಾನು'**
**ಕಾಲವೆ ನಿನ್ನ ಕೆಳೆ ಬೇಕು, ಆಳಿಕೆ ಬೇಡ ನನಗೆ;**
**ನಿನ್ನ ಪ್ರವಾಹ ಕೊಂಡೊಯ್ದತ್ತ ತೇಲಲು**
**ಸತ್ತ ಮೀನೇನಲ್ಲ ನಾನು,**
**ನಿನಗೆ ಬೇಕಾದತ್ತ ನೀನೆಳೆ, ನನಗೆ ಬೇಕಾದತ್ತ ನಾನೀಸುವೆ.**

ಕಾಲವನ್ನು ಕುರಿತು ಒಂದು ಆದರ್ಶವಾದ ನಿಲವನ್ನು ಕವಿ ತಾಳಿದ್ದಾನೆ. ಇಂಥ ಸಂದರ್ಭದಲ್ಲಿ ವಚನದ ಅಂಕಿತ ಸಾರ್ಥಕವಾಗುತ್ತದೆ. ಈ ಬಗೆಯ ವೀರಕ್ಕೆ ತಕ್ಕ ವಿನಯವೂ ಮನೆ ಮಾಡಿಕೊಂಡಿರುವುದರಿಂದ ಇಲ್ಲಿಯ ಒಟ್ಟು ಭಾವಕ್ಕೆ ಬಲ, ಹೊಸ ಹೊಳಪು ಬಂದಿದೆ.

**ನನಗೆ ಬಯಸದೆ ಬಂದ ಪದವಿಗಳೆಲ್ಲ**
**ನಿನ್ನ ಕರುಣೆಯ ಕುರುಹಲ್ಲದೆ**

**ನನ್ನ ಘನತೆಯ ಗುರುತಲ್ಲ ತಂದೆ;**
**ಹಿಡಿಮಣ್ಣಿನಲ್ಲಿ ಕಿಡಿಯೊಂದನಿರಿಸಿ ಕಳಿಸಿದೆ-**
**ಕಿಡಿ ಪುಟಗೊಂಡು ಅಗ್ನಿಯಾಗಿ**
**ಈಗ ಬೆಳಕಾಗಲು ಹಾರೈಸುತ್ತಿದೆಯಯ್ಯಾ,**

ಈ ಹಾರೈಕೆ, ಈ ಅರಿವು, ಒಂದೊಂದು ವಚನವನ್ನೂ ಒಂದೊಂದು ಹಣತೆಯಂತೆ ಬೆಳಕಿನ ಕುಡಿಯಾಗಿ ಹೊಳೆಯಿಸುತ್ತಿವೆ. ಇಲ್ಲಿಯ ಭಕ್ತಿ ಕುರುಡಲ್ಲ, ಕುರುಡುಗೊಳಿಸುವುದೂ ಅಲ್ಲ, 'ಬದುಕಿನ ಬರಡನಳಿಸುವ'ಂಥದು.

**ಉರಿವ ಕರ್ಮ, ಉರಿಸುವ ಜ್ಞಾನ-**
**ಎರಡೂ ಸೇರಿ ಬದುಕಿಸುವ ಭಕ್ತಿಯಾಯಿತಯ್ಯಾ**

ಎಂಬುದಾಗಿ ಶರಣರ ಜ್ಞಾನ ಮತ್ತು ಕ್ರಿಯೆಗಳ ಸಮನ್ವಯವನ್ನೇ ಸಾರುವಂಥದು.

ಇಲ್ಲಿಯ ಹಲವಾರು ವಚನಗಳು ನಮ್ಮ ಮನಸ್ಸನ್ನು ಸೆಳೆದು ಹೃದಯದಲ್ಲಿ ನೆಲೆಯೂರಿ ನಿಲ್ಲುವಂತಾಗುವುದು, ಶಂಕೆಗಳನ್ನು ನಿವಾರಿಸಿ ಒಂದು ಬಗೆಯ ತೃಪ್ತಿಯನ್ನು ನೀಡುವುದು ಅವು ಕಲಾಕೃತಿಯಾಗಲು ಹವಣಿಸುತ್ತಿರುವುದರಿಂದಲೇ-

**ಹಕ್ಕಿಯ ಗೂಡೊಂದು ಕಲಾಕೃತಿ, ಹಾವಿನ ಬೀಡೊಂದು ಕಲಾಕೃತಿ,**
**ಜೇಡನ ಬಲೆಯೊಂದು ಕಲಾಕೃತಿ, ಜೇನಿನ ಹುಟ್ಟೊಂದು ಕಲಾಕೃತಿ,**
**ನಿನ್ನ ಪ್ರತಿಯೊಂದು ಕೃತಿಯೂ ಕಲಾಕೃತಿಯಯ್ಯಾ;**
**ನನ್ನ ಒಂದು ಕೃತಿಯಾದರೂ ಕಲಾಕೃತಿಯಾಗುವಂತೆ,**
**ಅದು ಕಲಾಕೃತಿಯಾಗಿ ಹೊಮ್ಮಿದಾಗ**
**ಹೆಮ್ಮೆ, ಹಮ್ಮು, ಬಿಮ್ಮುಗಳು ನನ್ನನ್ನು**
**ಆವರಿಸದಂತೆ ಅನುಗ್ರಹಿಸಯ್ಯಾ.**

ಎಂಬುದು ನಿಜವಾದ ಕಲಾವಿದನ ಕೋರಿಕೆ. ಎಷ್ಟೊಂದು ಅನಿಸಿಕೆಗಳು, ಎಷ್ಟೊಂದು ಆಕರಗಳು, ಎಷ್ಟೊಂದು ಆಲೋಚನೆಗಳು, ಎಂಥೆಂಥ ಅನುಭವಗಳು ಇಲ್ಲಿ ಅಭಿವ್ಯಕ್ತಿಗೊಂಡಿರುವುದು; ಡಾ. ಹಾ.ಮಾ. ನಾಯಕರು ಅರ್ಥವತ್ತಾಗಿಯೇ ನುಡಿದಿರುವಂತೆ, 'ಇದು ಕಾಡನ್ನು ಸೋಸಿ ಉದ್ಯಾನ ಮಾಡಿದ ಕಲಾಕಾಯಕ'. 'ಬಹಳ ಎಚ್ಚರಿಕೆಯಿಂದ ಒಂದೊಂದು ಸಾಲನ್ನೂ ತೀಕ್ಷ್ಣ ಪರೀಕ್ಷಣಕ್ಕೆ ಗುರಿಪಡಿಸುತ್ತಾ ಮುಂದುವರೆದಿದ್ದೇನೆ' ಎಂಬ ಲೇಖಕರ ಮಾತನ್ನು ಇಲ್ಲಿಯ ವಚನ ರಚನೆಯ ವಿಧಾನದಲ್ಲಿ ವಿವಿಧ ವಿನ್ಯಾಸದಲ್ಲಿ ಒರೆಹಚ್ಚಿ ನೋಡಬಹುದಾಗಿದೆ. 'ಕವಿಯಾಗಿ,

ಪುರಾಣಿಕರು ಇದುವರೆಗೂ ಅನ್ವೇಷಿಸುತ್ತಿದ್ದ, ಒಂದು ಕಾವ್ಯ ಪ್ರಯೋಗ ಪರಿಣತಿಯನ್ನು ಈ ವಚನೋದ್ಯಾನದಲ್ಲಿ ಸಾಧಿಸಿಕೊಂಡಿದ್ದಾರೆ' ಎಂಬ ಡಾ. ಜಿ.ಎಸ್. ಶಿವರುದ್ರಪ್ಪನವರ ಅಭಿಪ್ರಾಯ ಸಿದ್ಧಯ್ಯನವರ ಸಾಧನೆಯ ವಿಶಿಷ್ಟತೆಯನ್ನು ಸಮರ್ಪಕವಾಗಿ ಸೂಚಿಸುತ್ತದೆ.

*(ಸಮತೋಲನ : ೧೯೭೧)*



# ೧೦



# ಮುರುಘಾಮಠದ ಪರಿಸರ – ಪ್ರಭಾವ

ಧಾರವಾಡದ ಮುರುಘಾಮಠವನ್ನು ನೆನೆಸಿದೊಡನೆ ನನ್ನ ಮನಸ್ಸಿನಲ್ಲಿ ನಾಲ್ಕು ದಶಕಗಳ ಹಿಂದಿನ ದೃಶ್ಯಗಳು ಮೂಡತೊಡಗುತ್ತವೆ. ಇಷ್ಟೊಂದು ಕಾಲಾವಧಿಯ ನಂತರವೂ ಅವೆಲ್ಲ ನಿನ್ನೆ–ಮೊನ್ನೆ ನಡೆದಂತೆ ನೆನಪಿನ ಉದ್ಯಾನದಲ್ಲಿ ಅರಳಿ ನಿಲ್ಲುತ್ತವೆ. 'ಎವೆ ತೆರೆದಿಕ್ಕುವ ಹೊತ್ತಿನ ಒಳಗೆ ಹಕ್ಕಿ ಹಾರುತಿದೆ ನೋಡಿದಿರಾ?' ಎಂದು ಕಾಲದ ವೇಗವನ್ನು ಕವಿ ನಮ್ಮ ಗಮನಕ್ಕೆ ತಂದುಕೊಟ್ಟರೂ ಜೀವನದಲ್ಲಿ ಕೆಲವು ಘಟನೆಗಳು ವ್ಯಕ್ತಿಯ ಬಾಳನ್ನು ರೂಪಿಸುವಲ್ಲಿಯ ಮಹತ್ವದ ಅವಿಭಾಜ್ಯ ಅಂಶಗಳಾಗಿ ಕಾಲವನ್ನು ಮೀರಿ ನಿಲ್ಲಬಲ್ಲ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತವೆ. ಮುರುಘಾಮಠದ ಶ್ರೀ ಶಿವಯೋಗೀಶ್ವರ ಪ್ರಸಾದ ನಿಲಯದಲ್ಲಿ ನಾನು ಕಳೆದ (ಗಳಿಸಿಕೊಂಡ) ಎಳೆವರೆಯದ ನಾಲ್ಕೈದು ವರುಷಗಳು ನನ್ನ ಜೀವನ ಪಥದ ಮಹತ್ವದ ಮೈಲಿಗಲ್ಲುಗಳಾಗಿವೆ.

ಧಾರವಾಡದಿಂದ ಒಂಬತ್ತು ಮೈಲಿನ ಮೇಲಿರುವ ಗರಗ ಗ್ರಾಮದ ಪ್ರಾಥಮಿಕ ಶಾಲೆಯಿಂದ ವಿದ್ಯಾರ್ಥಿಗಳು ಮುಲ್ಕೀ ಪರೀಕ್ಷೆಗಾಗಿ ೧೯೪೦ ರಲ್ಲಿ ಧಾರವಾಡಕ್ಕೆ ನಡೆದುಕೊಂಡು ಬಂದಾಗ ಮುರುಘಾಮಠವೇ ನಮಗೆ ಆಶ್ರಯ ನೀಡಿದ್ದಿತು. ಧಾರವಾಡದ ಉತ್ತರದಂಚಿಗಿದ್ದ ಆ ಮಠದ ಪರಿಸರದಲ್ಲಿ ನಾನು ಕಾಲಿಟ್ಟದ್ದು ಅದೇ ಮೊದಲು. ಆ ಬಿಸಿಲುಗಾಲದಲ್ಲಿ ಮಠದ ಆವರಣ ತಂಪಾಗಿದ್ದಿತು. ಅಲ್ಲಿ ನಮಗೆ ಯಾರ ಪರಿಚಯವಿಲ್ಲದಿದ್ದರೂ ನಮ್ಮ ಶಿಕ್ಷಕರ ಮೂಲಕ ಅಲ್ಲಿದ್ದವರೆಲ್ಲ ಪರಿಚಿತರಂತೆಯೇ ನಮ್ಮ ಬಗ್ಗೆ ಕಾಳಜಿವಹಿಸಿದರು. ಒಂಬತ್ತು ಒಂಬತೂವರೆ

ಗಂಟೆಯ ಹೊತ್ತಿಗೆ ನಮಗೆ ಊಟದ ವ್ಯವಸ್ಥೆಯಾಗಿರುತ್ತಿತ್ತು. ಬಿಸಿಲು ಚುರುಕು ಹತ್ತುವ ಮೊದಲೇ ನಾವು ನಮ್ಮ ಪರೀಕ್ಷಾ ಸ್ಥಳವಾದ ಟ್ರೇನಿಂಗ್ ಕಾಲೇಜಿನಲ್ಲಿರಲು ಇದರಿಂದ ತುಂಬ ಅನುಕೂಲವಾಗಿತ್ತು. ಸಂಜೆ ಮತ್ತೆ ಮರಳಿದಾಗ ಮಠದ ಆವರಣ ಅಲ್ಲಿಯ ಹೂ-ಗಿಡಗಳಿಂದಾಗಿ ಸುಗಂಧಮಯವಾಗಿರುತ್ತಿತ್ತು. ನಾವು ಪರೀಕ್ಷೆ ಮುಗಿಸಿ ಊರಿಗೆ ಹೊರಟಾಗ ನಮ್ಮ ಮುಖ್ಯಾಧ್ಯಾಪಕರು ನಮಗೆ ಅಲ್ಲಿಯ ಸ್ವಾಮಿಗಳ ದರ್ಶನ ಮಾಡಿಸಿದರು. ಚೆಂಗಾವಿಯ ಉಡುಪಿನಲ್ಲಿ ತೇಜಸ್ವಿಯಾಗಿದ್ದ ಅವರು 'ಬಹಳ ಸಂತೋಷ' ಎನ್ನುತ್ತ, ಮಂದಹಾಸದಿಂದ ನಮ್ಮನ್ನು ಆಶೀರ್ವದಿಸಿದರು. ಅವರ ಬಳಿಯಲ್ಲಿಯೇ ನಿಂತಿದ್ದ ಸೌಮ್ಯ ಮುಖಮುದ್ರೆಯ ಚಿಕ್ಕವಯಸ್ಸಿನ ಮರಿಸ್ವಾಮಿಗಳೊಬ್ಬರು ಅವರು ಹೇಳಿದ ಕೆಲಸವನ್ನು ತಕ್ಷಣವೇ ಮಾಡುತ್ತ, ಗೆಲುವಾಗಿರುವದನ್ನು ಕಂಡೆ.

ಆ ವರ್ಷ ಮುಲ್ಕಿ ಪರೀಕ್ಷೆಯಲ್ಲಿ ಧಾರವಾಡ ಕೇಂದ್ರಕ್ಕೆ ನಾನು ಮೊದಲ ನಂಬರು ಪಡೆದು ಪಾಸಾದೆ. ಹಳ್ಳಿಯ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನಿವೃತ್ತಿ ಪಡೆದಿದ್ದ ನನ್ನ ತಂದೆಯವರಿಗೆ ನನ್ನನ್ನು ಮುಂದೆ ಕಲಿಸುವಷ್ಟು ಧನಬಲವಿರಲಿಲ್ಲ. ಮುರುಘಾಮಠದ ಉಚಿತ ಪ್ರಸಾದನಿಲಯದಲ್ಲಿದ್ದು, ಹಾಯಸ್ಕೂಲ ಶಿಕ್ಷಣ ಮುಂದುವರಿಸಬಹುದೆಂಬ ಸಲಹೆಯೂ ಕೆಲ ಹಿತೈಷಿಗಳಿಂದ ಬಂದಿತು. ಅಲ್ಲಿ ನನಗೆ ನಿರಾಯಾಸವಾಗಿ ಪ್ರವೇಶವೂ ದೊರೆಯಿತು. ಸರಳ, ಪರಿಶುದ್ಧ ಜೀವನವನ್ನು ನಡೆಸುತ್ತಿದ್ದ ನನ್ನ ತಂದೆಯವರ ಶಿಕ್ಷಣದಿಂದ, ನನಗೆ ಮುರುಘಾಮಠದ ವಾತಾವರಣಕ್ಕೆ ಹೊಂದಿಕೊಳ್ಳುವದು ಕಷ್ಟದಾಯಕವೆನಿಸಲಿಲ್ಲ.

ಮಠದ ಆವರಣವನ್ನು ಪ್ರವೇಶಿಸುತ್ತಿದ್ದಂತೆಯೇ ಗುರುಗದ್ದುಗೆಯ ಮುಂದಿನ ಚೌಕು ಹಾಗೂ ಬನ್ನಿ ಬಿಲ್ವವೃಕ್ಷಗಳು ಕಣ್ಣಿಗೆ ಬೀಳುತ್ತವೆ. ಸಂಜೆಯ ಸಮಯವಾಗಿದ್ದರೆ ಸಾಮಾನ್ಯವಾಗಿ ಸ್ವಾಮಿಗಳು ಅಲ್ಲಿ ಭಕ್ತರೊಂದಿಗೆ ಮಾತನಾಡುತ್ತ ಕುಳಿತಿರುತ್ತಿದ್ದರು. ಬಲಬದಿಯಲ್ಲಿ ಪುರಾತನರ ಹೆಸರು ಹೊತ್ತ, ಚಚ್ಚೌಕಾಕಾರದಲ್ಲಿ ನಿರ್ಮಾಣಗೊಂಡ, ಪ್ರಸಾದನಿಲಯದ ವಿದ್ಯಾರ್ಥಿಗಳ ವಾಸದ ಅರವತ್ತು ಮೂರು ಕೋಣೆಗಳು, ಪ್ರಾಂಗಣದ ನಟ್ಟನಡುವೆ ಅರುಣೋದಯವನ್ನು ನಿರೀಕ್ಷಿಸುತ್ತಿರುವಂತಿರುವ ಅಥಣಿ ಶಿವಯೋಗಿಗಳ ಕರುಣೋದಯದ ಅಮೃತ ಶಿಲಾ ಪ್ರತಿಮೆ, ಸುತ್ತಲು ಉಪವನ :

**ತೆಂಗುಗರಿಯ ಚಾಮರವು, ಸುತ್ತು ಸಂಪಿಗೆಯ ಕಂಪುಗಾಳಿ**
**ಚೆಂಗುಲಾಬಿ, ಮಲ್ಲಿಗೆಯು, ಬಕುಳ, ಸೇವಂತಿ ರಂಗು ತಾಳಿ**
**ನಡುವೆ ಬೆಳ್ಳ ಬೆಳಕಾಗಿ ಮಾಗಿ ಶಿವಯೋಗಿ ಕುಲುಕುಲೆಂದು**
**ನಗುತಲಿಹನು ಆ ಸೂರ್ಯ-ಚಂದ್ರ ಸಾಷ್ಟಾಂಗದಲ್ಲಿ ಮಿಂದು.**

ನಸುಕಿನ ಐದು ಗಂಟೆಗೆ ಶಿವಯೋಗೀಶ್ವರ ಮಂಟಪದಲ್ಲಿ ವಿದ್ಯಾರ್ಥಿಗಳ ಪ್ರಾರ್ಥನೆಯಿಂದ ನಮ್ಮ ದಿನಚರಿ ಪ್ರಾರಂಭ, ಮುಂದೆ ಎರಡು-ಮೂರು ತಾಸು ಅಧ್ಯಯನ. ಬಸವತೀರ್ಥ (ಬಾವಿ)ದಿಂದ ನಮ್ಮ ಬಕೆಟ್ಟುಗಳಿಂದಲೇ ನೀರು ಸೇದಿಕೊಂಡು ಸ್ನಾನ. ೯.೩೦ ಗಂಟೆಗೆ ಊಟದ ಗಂಟೆ. ನಮ್ಮ ನಮ್ಮ ತಾಟು ತಂಬಿಗೆಗಳೊಂದಿಗೆ ಭೋಜನಾಲಯದಲ್ಲಿ ಪ್ರವೇಶ, ಪ್ರಾರ್ಥನೆಯ ಹಾಡುಗಳು, ವಚನಗಾಯನ, ಅರವತ್ತು ಮೂರು ಮಂದಿ ಪುರಾತನರಲ್ಲಿ ಪ್ರತಿದಿನವೂ ಒಬ್ಬೊಬ್ಬರ ಚರಿತ್ರೆಯ ವಾಚನ. ಅವರ ಹೆಸರಿನಲ್ಲಿ ಅಂದಿನ ಪ್ರಸಾದ. ಶಾಲೆ-ಕಾಲೇಜುಗಳಿಗೆ ಹೋಗಿ ಬಂದ ಮೇಲೆ ಸಂಜೆ ಏಳು ಗಂಟೆಗೆ ಶಿವಾನುಭವ ಕಾರ್ಯಕ್ರಮ, ವಚನಗಳನ್ನು ಕುರಿತು ಪ್ರವಚನ ಇತ್ಯಾದಿ. ಬೆಳಗಿನಂತೆಯೇ ಸಾಯಂಕಾಲದ ಊಟದ ಕ್ರಮ. ವಿದ್ಯಾರ್ಥಿಗಳೆಲ್ಲರಿಗೂ ಸಾಲುವಷ್ಟು ಕುಡಿವ ನೀರನ್ನು ಬಾವಿಯಿಂದ ಸೇದುವದು. ಎರಡು ಹೊತ್ತು ಊಟಕ್ಕೆ ನೀಡುವುದು ಇವನ್ನು ವಿದ್ಯಾರ್ಥಿಗಳೇ ಪಾಳೆಯ ಪ್ರಕಾರ ನೆರವೇರಿಸುವುದು. ಬೆಳಗಿನ ಪ್ರಾರ್ಥನೆ, ಸಾಯಂಕಾಲದ ಶಿವಾನುಭವ ಕಾರ್ಯಕ್ರಮಗಳಿಗೆ ಗೈರುಹಾಜರ ಇದ್ದವರಿಗೆ ರವಿವಾರದ ಅನುಭವದಡಿಗೆ, ಇದೊಂದು ರೀತಿ ಸ್ವಾವಲಂಬನದ ಪಾಠ. ಶಿಸ್ತುಪಾಲನೆ, ಸಂಯಮದ ವರ್ತನೆ ವಿದ್ಯಾರ್ಥಿಗಳಲ್ಲಿ ನೆಲೆಗೊಳ್ಳುವ ಅವಕಾಶ. ಈ ಬಗೆಯ ನಿಯಮಿತತೆ, ಸಮುದಾಯ ಕಾರ್ಯ ವಿದ್ಯಾರ್ಥಿಗಳ ಜೀವನವನ್ನು ಒಂದು ನೆಲೆಯಲ್ಲಿ ರೂಪಿಸುತ್ತಿದ್ದರೆ, ಅಲ್ಲಿ ಆಗಾಗ ನಡೆಯುತ್ತಿದ್ದ ಧಾರ್ಮಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ಇನ್ನೊಂದು ಪಾತಳಿಯಲ್ಲಿ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಾಸಕ್ಕೆ ಪೋಷಕವಾಗುತ್ತಿದ್ದವು. ಯಾರಾದರೂ ಗಣ್ಯ ವಿದ್ವಾಂಸರು, ಸಾಹಿತಿಗಳು, ಸಂಗೀತಗಾರರು ಆಗಾಗ ಸ್ವಾಮಿಗಳ ದರ್ಶನಕ್ಕೆ ಬರುತ್ತಲೇ ಇದ್ದರು. ಅಂಥವರು ಬಂದಾಗೆಲ್ಲಾ ಸ್ವಾಮಿಗಳಿಗೆ ಎಲ್ಲಿಲ್ಲದ ಹಿಗ್ಗು. ಸಾಯಂಕಾಲ 'ಶಿವಾನುಭ'ದ ವೇಳೆಗೆ ಅವರ ಭಾಷಣ, ಪ್ರವಚನ, ಸಂಗೀತ ಮೊದಲಾದವು ವಿದ್ಯಾರ್ಥಿಗಳ ಸಮ್ಮುಖದಲ್ಲಿ ನಡೆಯುತ್ತಿದ್ದವು. ಶ್ರಾವಣಮಾಸ ಹಾಗೂ ಶಿವಯೋಗೀಶ್ವರ ರಥೋತ್ಸವ ಸಂದರ್ಭದಲ್ಲಂತೂ ತಿಂಗಳುಗಟ್ಟಲೆ ಇಂಥ ಕಾರ್ಯಕ್ರಮಗಳಿಗೆ ಪೂರ ಬರುತ್ತಿತ್ತು. ಪ್ರಸಾದ, ಶಿವಾನುಭವ, ದಾಸೋಹ, ಕಾಯಕ ಮೊದಲಾದ ಪದಗಳಿಗೆ ಸ್ವಾಮಿಗಳ ಹಾಗೂ ಅವರಿಗೆ ತಕ್ಕ ಶಿಷ್ಯರಾಗಿದ್ದ ಮಹಾಂತಪ್ಪಗಳ ಮೂಲಕ ಮಠದಲ್ಲಿ ಮೂಡಿದ ವಾತಾವರಣವೇ ಅರ್ಥಬೋಧೆ ಮಾಡುವಂತಿತ್ತು. ವಿದ್ಯಾರ್ಥಿಗಳಿಗೆ ಇದರಿಂದ ಒದಗುತ್ತಿದ್ದ ಸಂಸ್ಕಾರ ಅದ್ವಿತೀಯವಾದದ್ದು. ವಿದ್ಯಾರ್ಥಿಗಳ ಅಭ್ಯಾಸಕ್ಕೆ ಇದರಿಂದ ತೊಂದರೆಯಾಗಬಹುದೆಂಬ ಭಾವನೆ ಕೆಲವರಲ್ಲಿ ಉಂಟಾಗಬಹುದಿತ್ತಾದರೂ ಕಾಲಕಳೆದಂತೆ ಅದರ ಮಹತ್ವ ಅವರವರ ಅಂತರಂಗಕ್ಕೇ ಗೋಚರಿಸುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

೧೯೪೨ ರಲ್ಲಿ ನಡೆದ ಪ್ರಸಾದನಿಲಯದ ಬೆಳ್ಳಿಹಬ್ಬದ ಕಾರ್ಯಕ್ರಮಗಳು ನನ್ನ ಮೇಲೆ ತುಂಬ ಪ್ರಭಾವ ಬೀರಿದವು. ಅದರ ಅಂಗವಾಗಿ ನೆರವೇರಿದ ಹರಿಹರ ಕವಿಯ ಬಗೆಗಿನ ವಿಶೇಷ ಸಾಹಿತ್ಯೋತ್ಸವ, ಅವನ ಕಾವ್ಯಗಳ ವಾಚನ ನನ್ನ ಮನಸ್ಸಿನ ಮೇಲೆ ಅಚ್ಚಳಿಯದ ಪರಿಣಾಮ ಬೀರಿದವು. ನಾನಾಗ ಹಾಯಸ್ಕೂಲಿನ ನಾಲ್ಕನೆಯ ವರ್ಗದ ವಿದ್ಯಾರ್ಥಿ, ನನ್ನಲ್ಲಿ ಕಾವ್ಯ ಮತ್ತು ಸಾಹಿತ್ಯದ ಬಗ್ಗೆ ಆಸ್ಥೆ ಕುದುರಿದ್ದು ಆಗಲೇ, ಅನೇಕ ಗಣ್ಯವಿದ್ವಾಂಸರನ್ನು, ಸಾಹಿತಿಗಳನ್ನು, ಒಂದೇ ವೇದಿಕೆಯ ಮೇಲೆ ಕಾಣುವ ಭಾಗ್ಯ ನಮ್ಮದಾಗಿತ್ತು. ಪ್ರೊ. ಬಸವನಾಳರ ಪ್ರೇರಣೆಯಿಂದ ಸಂಗೀತರತ್ನ ಮಲ್ಲಿಕಾರ್ಜುನ ಮನ್ಸೂರ ವಚನಗಳನ್ನು ಹಾಡಲು ಪ್ರಾರಂಭಿಸಿದ ಕಾಲ ಅದು. ಹರಿಹರ ಕವಿಯ ಮಾದಾರ ಚೆನ್ನಯ್ಯಗಳ ರಗಳೆಯ ಕೆಲವು ಸಾಲುಗಳನ್ನು ಮೊದಲಿಗೆ ನಾನು ಅವರ ಕಂಠದಿಂದ ಕೇಳಿದಾಗ ವಿಲಕ್ಷಣವಾದ ಒಂದು ಸವಿ ಅನುಭವ ನನ್ನಲ್ಲುಂಟಾಯಿತು.

**"ಎಲೆ ದೇವ, ದೇವನೊಲಿದನ ಕುಲವೆ ಸತ್ಕುಲಂ**
**ಘನಮಹಿಮನೊಲಿದ ಜಾತಿಯೆ ಜಾತಿ ನಿರ್ಮಲಂ"**

ನಾಲ್ವತ್ತು ವರ್ಷಗಳ ನಂತರವೂ ಅದನ್ನು ನೆನೆದುಕೊಂಡಾಗ ಇದನ್ನು ಹಾಡುತ್ತಿದ್ದಾಗಿನ ಅವರ ಹಾವಭಾವ, ಅದರಿಂದ ಹೊಮ್ಮಿದ ಆನಂದದಲ್ಲಿ ಮುಳುಗಿ ಲೋಲಾಡುತ್ತಿದ್ದ ಅಂದಿನ ಸಭೆ ಇಂದಿಗೂ ನನ್ನ ಕಣ್ಣ ಮುಂದೆ ಕಟ್ಟಿದಂತೆ, ಕಿವಿಯನ್ನು ತಟ್ಟಿದಂತೆ, ಅಂತಃಕರಣವನ್ನು ಮುಟ್ಟಿದಂತೆ ಭಾಸವಾಗುತ್ತದೆ.

ಅಂದಿನಿಂದ ವಚನ ಸಾಹಿತ್ಯ ನನ್ನ ಮನಸ್ಸನ್ನು ಆವರಿಸಿಬಿಟ್ಟಿತು. ಹರಿಹರ ಕವಿ ನನ್ನ ಅಚ್ಚುಮೆಚ್ಚಿನ ಕವಿಯಾದ. ಅದೇ ಸಂದರ್ಭದಲ್ಲಿ ನಾನೊಂದು ಕವಿತೆ ಬರೆದು ಮಠದಲ್ಲಿ ಶ್ರಾವಣಮಾಸದ ಕಾರ್ಯಕ್ರಮವೊಂದರಲ್ಲಿ ಓದಿದೆ. ಮೃತ್ಯುಂಜಯ ಸ್ವಾಮಿಗಳು ಸಂತೋಷದಿಂದ ಹಿಗ್ಗಿದರು. ಬಿಲ್ವಪತ್ರಿ ಹಾಗೂ ಗುಲಾಬಿ ಹೂವನ್ನು ನನ್ನ ಬೊಗಸೆಯಲ್ಲಿತ್ತು ಆಶೀರ್ವದಿಸಿದರು. ಸಭೆಯಲ್ಲಿ ಮಾತನಾಡುವಂತೆ ಧೈರ್ಯತುಂಬಿ ಪ್ರೋತ್ಸಾಹಿಸಿದರು. ತಮಗೆ ಆಗುತ್ತಿದ್ದ 'ಶಿವಯೋಗಿಗಳ ಪ್ರೇರಣೆ'ಯನ್ನು ವಿದ್ಯಾರ್ಥಿಗಳಲ್ಲಿಯೂ ಹರಿಸಿ ಹರಸಿದರು.

**ವಾಣಿ ವೀಣಾನಾದ ಪಾಣಿಯಿಂದೊಗೆವಂತೆ**
**ಜಾಣ ಶ್ರೀಗುರುವೆ ನೀಂ ನುಡಿಸಿದಂತೆ ನಾ**
**ಮಾಣದಲೆ ನುಡಿವೆ ಕೃಪೆಯಾಗು.**

ನಮ್ಮ ನಿತ್ಯ ಪಾಠಕ್ಕೊದಗಿಸಿದ್ದ ಮೈಲಾರ ಬಸವಲಿಂಗ ಶರಣರ 'ಗುರುಕರುಣ ತ್ರಿವಿಧಿ'ಯಲ್ಲಿಯ ಈ ಪದ್ಯವನ್ನು ಇಂಥ ಸಂದರ್ಭದಲ್ಲಿ ನಾನು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದೆ.

ಮಹಾಂತಪ್ಪಗಳು ಯಾವಾಗಲೂ ತಮ್ಮ ಗುರುಗಳ ಬಳಿಯಲ್ಲಿ, ಅವರ ಬೆನ್ನ ಹಿಂದೆಯೇ ಕಾದಿರುತ್ತಿದ್ದರು. ನಿಕಟ ಸಾಮೀಪ್ಯವನ್ನು ಸೂಚಿಸಲು ಅವರ ನೆರಳಾಗಿದ್ದರು ಎಂದು ಹೇಳುವುದುಂಟು. ಆದರೆ ಮಹಾಂತಪ್ಪಗಳು ಬರಿ ನೆರಳಾಗಿರಲಿಲ್ಲ. ಗುರುಗಳ ಯೋಜನೆಗಳನ್ನೆಲ್ಲ ಸದ್ದಿಲ್ಲದೆ ಕಾರ್ಯರೂಪಕ್ಕೆ ತರುವ ತಿರುಳಾಗಿದ್ದರು. ಗುರುಗಳದು ಬೀಸಾದ ನಡಿಗೆ. ಪ್ರತಿದಿನ ಸಂಜೆ ಪ್ರಸಾದನಿಲಯದ ಒಳಾಂಗಣದ ಸುತ್ತು ವೇಗದಿಂದ ನಡೆದಾಡುತ್ತಿದ್ದರು. ಅದು ಶಿವಯೋಗಿಗಳ ಮಂಟಪಕ್ಕೆ ಪ್ರದಕ್ಷಿಣೆಯೂ ಆಗಿರುತ್ತಿತ್ತು. ಹಾಗೆಯೆ ವಿದ್ಯಾರ್ಥಿಗಳು ತಮ್ಮ ತಮ್ಮ ಕೋಣೆಗಳನ್ನು, ಮುಂಭಾಗದ ಆವರಣವನ್ನು ಹೇಗೆ ಇಟ್ಟಿದ್ದಾರೆ ಎಂಬುದರ ಸೂಕ್ಷ್ಮಾವಲೋಕನವೂ ಆಗಿರುತ್ತಿತ್ತು. ಮಹಾಂತಪ್ಪಗಳು ಅಷ್ಟೇ ವೇಗದಿಂದ ಅವರನ್ನು ಅನುಸರಿಸುತ್ತಿದ್ದರು. ಕೆಲವೊಂದು ವಿಚಾರಗಳ ವಿನಿಮಯವೂ ಆಗ ಅವರಿಬ್ಬರಲ್ಲಿ ನಡೆಯುತ್ತಿತ್ತು. ಕೋಣೆಯ ಒಳಗೆ ಕುಳಿತಿರುತ್ತಿದ್ದ ನಮಗೆ ಅವರ ಈ ಪ್ರದಕ್ಷಿಣೆ ಒಂದು ಪರೀಕ್ಷಾಸಮಯದಂತೇ ಅನಿಸುತ್ತಿತ್ತು. ಅವರ ನಡಿಗೆಯ ಲಯ ಇಂದಿಗೂ ನನ್ನ ಒಳಗಿವಿಗೆ ಕೇಳಿಸುವಂತಿದೆ. ಸ್ವಾಮಿಗಳಿಗೆ ನಮ್ಮ ನಿತ್ಯದ ನಿಯಮಗಳಲ್ಲಿ ಎಷ್ಟೂ ವ್ಯತ್ಯಾಸವಾಗಕೂಡದು. ನಸುಕಿನ ಪ್ರಾರ್ಥನೆ, ಸಂಜೆಯ ಶಿವಾನುಭವ ಮೊದಲಾದವುಗಳನ್ನು ನಾವು ಯಾವ ಕಾರಣಕ್ಕೂ ತಪ್ಪಿಸಕೂಡದು. ಒಂದೆರಡು ಸಲ ಮೊದಲೇ ತಿಳಿಸಿ ಅನಿವಾರ್ಯ ಕಾರಣಗಳಿಂದ ತಪ್ಪಿಸಿದರೆ ಕ್ಷಮ್ಯ, ಆದರೆ ಅದೇ ಮುಂದುವರಿಯಕೂಡದು. ಹಾಗೆ ಆದಾಗ ಇಲ್ಲವೆ ಯಾವುದಾದರೂ ಅನುಚಿತ ಘಟನೆ ನಡೆದಾಗ ಮೃತ್ಯುಂಜಯಪ್ಪಗಳು ಕರೆಕಳುಹಿಸುತ್ತಿದ್ದರು. ಭಯ-ಭಕ್ತಿಯಿಂದ ನಾವು ಅವರೆದುರು ಹೋಗಿ ಕೈಕಟ್ಟಿಕೊಂಡು ನಿಲ್ಲುತ್ತಿದ್ದೆವು. ಅವರ ಸಿಟ್ಟು ಇಳಿಯುವವರೆಗೂ ನಾವು ಮೌನವಾಗಿಯೇ ಇರುತ್ತಿದ್ದೆವು. 'ತಪ್ಪಾಯಿತ್ರೆಪಾ' ಎನ್ನುವ ಒಂದೇ ಮಾತು ನಮ್ಮಿಂದ ತಾನೇತಾನಾಗಿ ಹೊರಬರುತ್ತಿತ್ತು. 'ಇನ್ನೊಮ್ಮೆ ಹೀಗೆ ಮಾಡಬಾರದು' ಎಂದು ಅವರೆಂದ ಕೂಡಲೆ, ನಮ್ಮ ಮನಸ್ಸು ಒಮ್ಮೆಲೆ ಹಗುರಾಗಿ, ಭಯದ ಸ್ಥಾನವನ್ನೆಲ್ಲ ಭಕ್ತಿಯೇ ತುಂಬಿಕೊಳ್ಳುತ್ತಿತ್ತು. 'ತಂದೆ ಮಕ್ಕಳಿಗೆ ಬುದ್ಧಿ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ' ಎಂಬ ಬಸವಣ್ಣನವರ ವಚನದಂತೆ ಮೃತ್ಯುಂಜಯಪ್ಪಗಳ ರೀತಿ. ಗುರುನಿಷ್ಠರೂ, ಸರಳ ಸ್ವಭಾವದವರೂ ಶಾಂತಮೂರ್ತಿಗಳೂ ಆದ ಮಹಾಂತಪ್ಪಗಳದು ಮಾತೃಹೃದಯ.

ಗುರುಗಳು ವಿದ್ಯಾರ್ಥಿಗಳ ನಡೆವಳಿಕೆಯ ಬಗ್ಗೆ ಹೀಗೆ ಸಿಟ್ಟಿಗೆದ್ದಾಗ ಅವರು 'ಇದೊಂದು ಸಲ ಕ್ಷಮಿಸಿ ಬಿಡ್ರೆಪಾ' ಎಂದು ಅವರ ಮನಸ್ಸನ್ನು ಮೃದುಗೊಳಿಸಿಬಿಡುತ್ತಿದ್ದರು. ಮಹಾಂತಪ್ಪಗಳು ಆಮೇಲೆ ತಮ್ಮದೇ ಆದ ರೀತಿಯಲ್ಲಿ ನಮಗೆ ಬುದ್ಧಿವಾದ ಹೇಳಿ ಸಾಂತ್ವನಗೊಳಿಸಿ ಕಳಿಸುತ್ತಿದ್ದರು. ಚಂದ್ರನಂತೆ ಸೂರ್ಯನ ಪ್ರಖರತೆಯನ್ನು ತಂಪುಗೊಳಿಸಿಕೊಡುವ ಅನೇಕ ಸಂದರ್ಭಗಳಲ್ಲಿ ಅವರು ನಮ್ಮನ್ನು ಹೀಗೆ ರಕ್ಷಿಸಿ ಕಾಪಾಡಿದ್ದುಂಟು. ಸ್ವಂತ ಮಕ್ಕಳನ್ನು ಎಲ್ಲರೂ ಮುದ್ದಿಸುವರು. ಆದರೆ ಎಲ್ಲ ಮಕ್ಕಳನ್ನು ತಾಯಿಮಾತ್ರ ಮುದ್ದಿಸಿಯಾಳು. ಅಂಥ ಮಾತೃಹೃದಯ ಮಹಾಂತಪ್ಪಗಳದು.

ಸ್ವಾಮಿಗಳದು 'ಮಾಡಿದೆನೆಂಬುದು ಮನದಲ್ಲಿ ಹೊಳೆಯದ' ಸೇವಾಭಾವ. ಅವರು ಯಾರಿಗೂ ಉಪದೇಶ ಮಾಡುತ್ತಿರಲಿಲ್ಲ. ಅವರ ನಡೆಯೇ ಜೀವಂತ ಉಪದೇಶ. ಒಮ್ಮೊಮ್ಮೆ ವಿದ್ಯಾರ್ಥಿಗಳು ಏನಾದರೂ ತಪ್ಪು ಮಾಡಿದಾಗ ಅವರಿಗೆ ಬುದ್ಧಿ ಹೇಳುತ್ತಿದ್ದ ಮಾತುಗಳನ್ನು ನಾನು ಪದ್ಯ ರೂಪದಲ್ಲಿ ಹೀಗೆ ಹಿಡಿದಿಟ್ಟಿದ್ದೇನೆ.

**"ವ್ಯರ್ಥವಲ್ಲ ಶಿವಕೊಟ್ಟ ವಸ್ತು ಕಸಬರಿಗಿ ಕಡ್ಡಿ ಕೂಡ**
**ಅರ್ತಿಯಿಂದ ಪುಟ ತೆರೆಯಬೇಕು ಅಪನವರ ವಚನ ನೋಡ;**
**ಮಾವಿನೆಲೆಯ ನೀ ಮಾಡಬಲ್ಲೆಯಾ? ಯಾವ ಬಣ್ಣದಿಂದ?**
**ನಾನು, ನೀನು, ಏನೇನೊ ಮೂಡಿ ಬಂತದೇ ಮಣ್ಣಿನಿಂದ.**
**ದುಡಿಯಬೇಕು, ನೆಲ ಕಡಿಯಬೇಕು, ಹೋರಾಡಬೇಕು ಜೀವ**
**ಪಡೆದು, ಕೊಟ್ಟು ಕೊಂಡಾಡಬೇಕು ಸರ್ವಾಂಗಲಿಂಗ ಜಗವ**
**ಕಟಕುರೊಟ್ಟಿ, ಮೆಣಸ್ಹಿಂಡಿ ತಿಂದು, ಮೇಲೊಂದು ಗುಟುಕು ನೀರು**
**ಕಟೆದ ಹಾಗೆ ಈ ಮೂರ್ತಿ ಮಾಟ, ಆಮೇಲೆ ಗುಡಿಯು ತೇರು.**

ಯಾವುದಾದರೂ ಸಭೆ ನಡೆದಾಗ ಅದರ ಅಂತ್ಯ ಮಂಗಲ ಅವರಿಂದಲೇ ಆಗಬೇಕು. ಎಲ್ಲರಲ್ಲೂ ಅವರು ಬೇಡುತ್ತಿದ್ದುದು ಭಕ್ತಿ–ಭಿಕ್ಷೆ. ಅವರು ಹಾಡುತ್ತಿದ್ದ ಅನುಭವದ ಹಾಡುಗಳಿಗೆ ಅವರದೇ ಆದ ರೀತಿ, ಸೊಗಸು, 'ನೋಡಲಾಗದೇ ದೇವ', 'ಮಾಡಲಿಲ್ಲವೇ ತಪವ', 'ಹರಪೂಜೆ ಗುರುಸೇವೆ', 'ಲಾಲಿಲಾಲಿಯು ಪರಬ್ರಹ್ಮದ ಶಿಶುವೆ' –ಇವೇ ಮೊದಲಾದ ಹಾಡುಗಳನ್ನು ತಮ್ಮ ಜೀವಜೀವಾಳದಿಂದ ಅದ್ದಿ ತೆಗೆಯುತ್ತಿದ್ದರು.

ಈ ಗುರುಶಿಷ್ಯರು ಪರಸ್ಪರರನ್ನು ಅರಿತುಕೊಂಡಿದ್ದ ಬಗೆ, ಬೆಳೆಸಿಕೊಂಡಿದ್ದ ಸಂಬಂಧ ಅಪರೂಪವಾದದ್ದು. ಮೃತ್ಯುಂಜಯಪ್ಪಗಳ ಮನಸ್ಸಿನಲ್ಲಿ ಬಂದದ್ದೆಲ್ಲ ಮಹಾಂತಪ್ಪಗಳಿಗೆ ತಟ್ಟನೆ ತಿಳಿದುಬಿಡುತ್ತಿತ್ತು. ಕ್ರಿಯೆ, ಪ್ರತಿಕ್ರಿಯೆಗಳೂ ಪರಸ್ಪರ ಪೂರಕ

ಪರಿಪೂರಕವಾಗಿರುತ್ತಿದ್ದವು. ಯಾವುದಕ್ಕೂ ಮಹಾಂತಪ್ಪಗಳ ಸಲಹೆ ಬೇಕು; ಅವರ ಸಂದೇಹಗಳಿಗೆ ಇವರು ತಕ್ಷಣ ಪರಿಹಾರ ಸೂಚಿಸುತ್ತಿದ್ದರು. ಆದರೂ 'ತಮ್ಮ ಅಪ್ಪಣೆಯಂತೆ ಆಗಲ್ರೆಪಾ' ಎಂಬ ಕೈಂಕರ್ಯಭಾವ ಅಲ್ಲಿ ತಾನೆ ತಾನಾಗಿ ಕಂಗೊಳಿಸುತ್ತಿತ್ತು.

ಬಸವಾದಿ ಪ್ರಮಥರ ಹಾದಿಯಲ್ಲಿ ನಡೆದ ಶ್ರೀಮದಥಣಿ ಶಿವಯೋಗಿಗಳ ಸಂಪೂರ್ಣ ಕೃಪೆಗೆ ಪಾತ್ರರಾದ ಮೃತ್ಯುಂಜಯಪ್ಪಗಳು ತಾವು ಅಳವಡಿಸಿಕೊಂಡಿದ್ದ ಹಿರಿಯ ಗುಣಗಳ ಸಾರವನ್ನೆಲ್ಲ ಮಹಾಂತಪ್ಪನವರಿಗೆ ಧಾರೆಯೆರೆದರು. ಅದರ ಫಲವಾಗಿಯೇ ಮುರುಘಾಮಠದ ಉದಾತ್ತ ಪರಂಪರೆಗೆ ಎಲ್ಲಿಯೂ ಧಕ್ಕೆ ಬರದಂತೆ ಮಹಾಂತಪ್ಪಗಳ ಮುಖಾಂತರ ಅದು ಅಖಂಡವಾಗಿ, ಹೊಸಕಾಲಕ್ಕೆ ತಕ್ಕಂತೆ ಹೊಸದನ್ನು ಅಳವಡಿಸಿಕೊಳ್ಳುತ್ತ ಮುಂದುವರಿದಿದೆ. ಈಗ್ಗೆ ೪೩ ವರ್ಷಗಳ ಹಿಂದೆ ನಾನು ಮೊಟ್ಟ ಮೊದಲು ಕಂಡ 'ಮಹಾಂತ ದೇವರು' ಇಂದಿಗೂ ಅದೇ ಸರಳತೆಯ ಮುಗ್ಧತೆಯ ಮೂರ್ತಿಯಾಗಿದ್ದು, ಮಾತೃವಾತ್ಸಲ್ಯ, ಗುರುಭಕ್ತಿ, ದಾಸೋಹ ಭಾವಗಳ ಪರಿಪಕ್ವತೆಯ ಪ್ರತೀಕವಾಗಿದ್ದಾರೆ.

ಮುರುಘಾಮಠದ ಆವರಣ ಈಗ ಹೊಸ ಹೊಸ ಕಟ್ಟಡಗಳಿಂದ ತುಂಬಿ ತುಳುಕುತ್ತಿದೆ. ಹೊಸರೂಪ ಲಾವಣ್ಯಗಳಿಂದ, ಗೋಪುರದ ಗಡಿಯಾರದಿಂದ, ಹೊಳೆಯುವ ಕಳಸದಿಂದ ಕಣ್ಣಿಗೆ ಎದ್ದು ಕಾಣುತ್ತಿದೆ. ಇದೆಲ್ಲ ಕಣ್ಣಮುಂದೆಯೇ ಇದ್ದಾಗಲೂ, ನನ್ನ ಮನಸ್ಸು ಅದೇಕೊ ನಾಲ್ವತ್ತು ವರ್ಷಗಳ ಹಿಂದೆ ಸರಿದು, ನಿರಾಡಂಬರವಾದ ಗುರುಗದ್ದುಗೆಯ ಮುಂದಿನ ಚೌಕಿನಲ್ಲಿ ಮೃತ್ಯುಂಜಯಪ್ಪಗಳು ಮಂದಹಾಸ ಬೀರುತ್ತ ಕುಳಿತಂತೆ, ಬದಿಯಲ್ಲಿಯೆ ಗೋಡೆಗಾತು ನಿಂತಿರುವ ಮಹಾಂತ ದೇವರ ಕಿವಿಯಲ್ಲಿ ಯಾವುದೊ ಸೂಕ್ಷ್ಮ ಸಂಗತಿಯನ್ನು ಉಸುರುತ್ತಿದ್ದಂತೆ, ಅಲ್ಲಿಯೇ ಎದುರಿಗಿದ್ದ ಬನ್ನಿಯ ಗಿಡ, ಬಿಲ್ವವೃಕ್ಷಗಳು ಬಂದ ಭಕ್ತರನ್ನು ಬರಮಾಡಿಕೊಳ್ಳುತ್ತಿರುವಂತೆ; 'ಶ್ರೀ ಗುರುವೆ ಸತ್ಕ್ರಿಯೆಯ ಆಗರವೆ ಸುಜ್ಞಾನ ಸಾಗರವೆ ಎನ್ನ ಮತಿಗೆ ಮಂಗಳವಿತ್ತು ರಾಗದಿಂ ಬೇಗ ಕೃಪೆಯಾಗು' ಎಂದು ವಿದ್ಯಾರ್ಥಿಗಳು ಏಕಕಂಠದಿಂದ ಹಾಡುತ್ತಿರುವಂತೆ ಆ ಹಿಂದಿನ ದೃಶ್ಯವೇ ಕಣ್ಣೆದುರು ಕಟ್ಟಿದಂತಾಗಿ ಯಾವುದೋ ಹೇಳಲಾಗದ ಪವಿತ್ರ ಭಾವನೆಯಲ್ಲಿ ಮುಳುಗಿಬಿಡುತ್ತದೆ.

ಇಪ್ಪತ್ತೆರಡು ವರ್ಷಗಳ ಹಿಂದೆ ಮೃತ್ಯುಂಜಯಪ್ಪಗಳ ೭೪ ನೆಯ ವರ್ಧಂತಿ ಮಹೋತ್ಸವದ ಶುಭದಿನದಂದು ಪ್ರಸಾದನಿಲಯದ ಹಿಂದಿನ ವಿದ್ಯಾರ್ಥಿಗಳ ತೃತೀಯ ಸ್ನೇಹ ಸಮ್ಮೇಳನದ ಸಂದರ್ಭದಲ್ಲಿ 'ನೈವೇದ್ಯ' ಸಂಪುಟವನ್ನು ಸಂಪಾದಿಸಿ ಶ್ರೀಗಳವರಿಗೆ ಅರ್ಪಿಸುತ್ತ, ನಾನು ಬರೆದು ಓದಿದ 'ಪುಷ್ಪಾಂಜಲಿ' ಕವಿತೆಯ ಒಂದೆರಡು ನುಡಿಗಳನ್ನೇ

ಮಹಾಂತಪ್ಪಗಳ ಅಮೃತ ಮಹೋತ್ಸವದ ಸಂದರ್ಭದಲ್ಲಿ ಮತ್ತೆ ನೆನಪು ಮಾಡಿಕೊಳ್ಳುತ್ತ ಇವರಲ್ಲಿಯೂ ಅವರನ್ನೇ ಕಾಣುತ್ತೇನೆ.

ಸ್ವಾಮಿಯಡಿಗೆ ಶಿರಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ
ಅರಿವು–ಮರೆವು ಕಣ್ದೆರೆದು ಕರೆದ ಆ ಪೂರ್ವಸ್ಮರಣೆಯಿಂದ
ನೀಲದಲ್ಲಿ ತೇಲಾಡೆ ಗಾಳಿಪಟ ಕೃಪಾಸೂತ್ರದಿಂದ
ಕಂಡವೇಸೊ ನೆಲ ಜಲದ ಚೆಲುವ ನೀವಿತ್ತ ನೇತ್ರದಿಂದ

ಎತ್ತರೆತ್ತರಕು ಹಾರಿ ಏರಿದರು ಕೋತಿ ಹೊಡೆಯದಂತೆ
ದಿಕ್ಕು ದಿಕ್ಕುಗಳ ಗಾಳಿ ಜಗ್ಗಿದರು ಬಿಲ್ಲು ಮಣಿಯದಂತೆ
ನೂರು ಸೊಲ್ಲು ಗುಲ್ಲಿನಲು ಎಲ್ಲೊ ಮಿಡಿದಿಹುದು ಏಕನಾದ
ಆ ನಾದ ಹಿಡಿದು ಬಂದೇವು ನಾವು ಕರುಣಿಸಿರಿ ತಮ್ಮ ಪಾದ.

ದೊರೆಯಬಹುದೆ ದರುಶನವು, ದಿವ್ಯ ಸ್ಪರ್ಶನದ ಜೀವನಾದ ?
ಎರೆದು ಹೊಚ್ಚಿ ಎದೆ ಹಾಲು ತೊರೆವ ಪಾದೋದಕ ಪ್ರಸಾದ.
ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು
ಅರಿವಿನೊಂದು ಹೊಸ ಬರವಿಗಾಗಿ ಹಾತೊರೆಯುತಿಹುದು ಒಡಲು.

ಮರ್ತ್ಯವನ್ನೆ ಮಹಮನೆಯ ಗೈದ ಮೃತ್ಯುಂಜಯನ ಚರಣ
ಶರಣಭಾವದಲಿ ಕಿರಣಿಸಿಹುದು ಪುಷ್ಪಾಂಜಲಿಯ ಸ್ಮರಣ
ಇರುಳ ಮೌನ ತಿಳಿಗೊಂಡು ಅರಳಿ ನರುಗಂಪು ನಸುಕು ಹರಿದು
ಕಿವಿಯೊಳಿಂತು ಉಚ್ಚರಿಸಿತಣ್ಣ ಎಚ್ಚರಿಸಿ ದೂರ ಕರೆದು.

*(ಅಮೃತಬೆಳಸು : ೧೯೮೫)*






ಧಾರವಾಡ ಮುರುಘಾಮಠದ ಉಚಿತ ಪ್ರಸಾದ ನಿಲಯ ಅನೇಕ ಸಾವಿರ ಬಡ ವಿದ್ಯಾರ್ಥಿಗಳ ಬಾಳಿಗೆ ಬೆಳಕನ್ನು ನೀಡಿದ ದಾರಿದೀಪ. ಪೂಜ್ಯ ಮೃತ್ಯುಂಜಯ ಅಪ್ಪಗಳ ಮಾನವೀಯ ಅಂತಃಕರಣ, ಶಿಕ್ಷಣಪ್ರೀತಿ, ವಿದ್ಯಾರ್ಥಿ ವಾತ್ಸಲ್ಯ ಕಾರಣವಾಗಿ ೧೯೧೭ರಲ್ಲಿ ಸ್ಥಾಪಿತವಾದ ಇದು ಈ ಭಾಗದ ಗ್ರಾಮೀಣ ಬಡ ವಿದ್ಯಾರ್ಥಿಗಳ ಆಶಾಕಿರಣವಾಗಿ, ಉಜ್ವಲ ಭವಿಷ್ಯ ರೂಪಿಸುವ ಮಹಾಮನೆಯಾಗಿ ಕಾರ್ಯ ಮಾಡುತ್ತ ಬಂದಿದೆ. ಇಲ್ಲಿ ಪ್ರಸಾದ ಸ್ವೀಕರಿಸಿ ಅಧ್ಯಯನ ಮಾಡಿದ ಅನೇಕ ವಿದ್ಯಾರ್ಥಿಗಳು ಉನ್ನತ ಹುದ್ದೆ-ಸ್ಥಾನಮಾನಗಳನ್ನು ಪಡೆದು ನಾಡಿಗೆ ವಿಶೇಷ ಗೌರವವನ್ನು ತಂದುಕೊಟ್ಟಿದ್ದಾರೆ. ಇದರ ಪ್ರೇರಣೆಯಿಂದ ಕನ್ನಡ ನಾಡಿನ ತುಂಬ ಮಠ-ಮಾನ್ಯಗಳು ಉಚಿತ ಪ್ರಸಾದ ನಿಲಯಗಳನ್ನು ಆರಂಭಿಸಿ ದೇಶದ ಶೈಕ್ಷಣಿಕ ಪ್ರಗತಿಗೆ ಕಾರಣವಾಗಿವೆ.

ಈ ಸಂಸ್ಥೆಗೆ ಈಗ ನೂರು ವರ್ಷ ಸಾರ್ಥಕ ಸೇವೆ ಸಲ್ಲಿಸಿದ ಸಂಭ್ರಮ. ಇದರ ಶತಮಾನೋತ್ಸವವನ್ನು ಹಲವು ಅರ್ಥಪೂರ್ಣ ಯೋಜನೆಗಳನ್ನು ಹಮ್ಮಿಕೊಳ್ಳುವ ಮೂಲಕ ಆಚರಿಸಲು ಸಂಕಲ್ಪಿಸಲಾಗಿದೆ. ಅದರಲ್ಲಿ ಗ್ರಂಥಪ್ರಕಟಣೆಗೆ ವಿಶೇಷ ಆದ್ಯತೆ ನೀಡಲಾಗಿದೆ. ನೂರೊಂದು ಮೌಲಿಕಗ್ರಂಥಗಳು, ಒಂದು ಬೃಹತ್ ಸ್ಮರಣ ಸಂಪುಟ, ಒಂದು ಪ್ರಸಾದನಿಲಯದ ವಿದ್ಯಾರ್ಥಿಗಳ ಸೂಚಿ, ಈ ಯೋಜನೆಯ ಅಡಿಯಲ್ಲಿ ಪ್ರಕಟವಾಗುತ್ತಿವೆ.

ಇಲ್ಲಿ ಆಯ್ಕೆ ಮಾಡಿದ ಗ್ರಂಥಗಳೆಲ್ಲ ಶರಣ ಸಾಹಿತ್ಯ-ಸಂಸ್ಕೃತಿ ಕೇಂದ್ರಿತವಾಗಿವೆ. ಇವುಗಳಲ್ಲಿ ಏಕವ್ಯಕ್ತಿ ಷಟ್‌ಸ್ಥಲ ವಚನ ಸಂಪುಟಗಳು, ನಿಶ್ಚಿತ ವಿಷಯ ಕುರಿತ ಅನೇಕ ವ್ಯಕ್ತಿ ಆಯ್ದ ವಚನ ಸಂಕಲನಗಳು, ಸ್ವರವಚನ ಸಂಪುಟಗಳು, ತಾತ್ವಿಕ ಗ್ರಂಥಗಳು, ಲಿಂಗಾಯತ ಪ್ರಾಚೀನ ಕಾವ್ಯಗಳು, ವಚನ ಸಾಹಿತ್ಯ ಸಂಬಂಧಿ ಏಕವ್ಯಕ್ತಿ ಬಿಡಿಲೇಖನ ಸಂಗ್ರಹಗಳು ಸಮಾವೇಶಗೊಂಡಿವೆ. ಇವು ಕೇವಲ ಸಂಖ್ಯೆಯನ್ನು ಪೂರೈಸಲು ಪ್ರಕಟಿಸಿದ ಸಾಮಾನ್ಯ ಕೃತಿಗಳಾಗಿರದೆ, ಸಂಶೋಧಕರು ಹಾಗೂ ಸಾಮಾನ್ಯ ಓದುಗರು ಉಭಯತರಿಗೂ ತುಂಬ ಉಪಯುಕ್ತವಾದ ಉನ್ನತ ಗುಣಮಟ್ಟದ ಆಕರಗ್ರಂಥಗಳಾಗಿವೆಯೆಂದು ಹೇಳಲು ಸಂತೋಷವೆನಿಸುತ್ತದೆ.

ಜ್ಞಾನದ ಬಲದಿಂದ ಅಜ್ಞಾನದ ಕೇಡು,
ಜ್ಯೋತಿಯ ಬಲದಿಂದ ತಮಂಧದ ಕೇಡು